KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜುಲೈ ೩೦, ೨೦೦೯ (ಶ್ರಾವಣ ೮, ಶಕ ವರ್ಷ ೧೯೩೧) | ಸಂಚಿಕೆ ೩೧ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ ಡಿಟಿಸಿಆರ್/186/2007–08, ದಿನಾಂಕ:24ನೇ ಫೆಬ್ರವರಿ, 2009**

**ಆರಕ್ಷಕ ಉಪ ನಿರೀಕ್ಷಕರು, ಕೊಪ್ಪ ಪೊಲೀಸ್ ಠಾಣೆ, ಮದ್ದೂರು ತಾಲ್ಲೂಕು ಇವರ ಕ್ರೈಂ ಸಂಖ್ಯೆ:02/2008, ದಿನಾಂಕ:04.01.2008**

| ಪಿರ್ಯಾದುದಾರರು | ಆರೋಪಿ |
|---|---|
| ಆರಕ್ಷಕ ಉಪ ನಿರೀಕ್ಷಕರು, ಕೊಪ್ಪ ಪೊಲೀಸ್ ಠಾಣೆ, ಮದ್ದೂರು ತಾಲ್ಲೂಕು. | ಪುಟ್ಟರಾಮು ಬಿನ್ ಬೇಚಕ್ಕಲ್ಲಯ್ಯನ ದಾಸಪ್ಪ, ಹುನುಗನಹಳ್ಳಿ, ಹುಲಿಯೂರು ದುರ್ಗ ಹೋಬಳಿ, ಕುಣಿಗಲ್ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:04.01.2008ರಂದು ರಾತ್ರಿ:08.30 ಗಂಟೆ ಸಮಯದಲ್ಲಿ ಮದ್ದೂರು ತಾಲ್ಲೂಕು, ಕೊಪ್ಪ ಹೋಬಳಿ, ಅಬಲವಾಡಿ–ನಂಬಿನಾಯಕನಹಳ್ಳಿ ರಸ್ತೆಯಲ್ಲಿರುವ ದರ್ಗಾದ ಬಳಿ ಅಕ್ರಮವಾಗಿ 311.040 ಲೀ ನಕಲಿ ಮದ್ಯವನ್ನು ಟಾಟಾ ಸಿಯಾರ ಸಂಖ್ಯೆ:ಕೆಎ–01/ಎಂ–8825 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 32 ಮತ್ತು 34 ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಹಾಗೂ ಮದ್ಯವನ್ನು ಪಂಚನಾಮೆಯಲ್ಲಿ ಅಮಾನತ್ತುಪಡಿಸಿಕೊಂಡು ಈ ಬಗ್ಗೆ ಕ್ರೈಂ ಸಂಖ್ಯೆ: 02/2008 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ವಾಹನ ಹಾಗೂ ಮದ್ಯವನ್ನು ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು ವಿಚಕ್ಷಣದಳ ಇವರಿಂದ ಅನುಮತಿ ಪಡೆದು ಅಬಕಾರಿ ನಿರೀಕ್ಷಕರು, ಮದ್ದೂರು ವಲಯ, ಮದ್ದೂರು ಇವರಿಗೆ ಹಸ್ತಾಂತರಿಸಿರುತ್ತಾರೆ.

ಪ್ರಕರಣದ ಬಗ್ಗೆ ಅಬಕಾರಿ ನಿರೀಕ್ಷಕರು, ಮದ್ದೂರು ವಲಯ, ಮದ್ದೂರು ಇವರು ವಾಹನದ ಮಾಲೀಕತ್ವವನ್ನು ತಿಳಿಯಲು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೋರಮಂಗಲ, ಬೆಂಗಳೂರು ರವರಿಂದ ವಾಹನದ ಮಾಲೀಕತ್ವದ ವಿವರವನ್ನೊಳಗೊಂಡ "ಬಿ" ವಹಿ ಪಡೆದು, ರಾಸಾಯನಿಕ ವಿಶ್ಲೇಷಣ ವರದಿಯ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡುಬಂದಿದ್ದು ಅವು ಭಾರತದ ಮಾನಕ ಬ್ಯೂರೋಗೆ ಅನುಗುಣವಾಗಿರುವುದಿಲ್ಲ ಮತ್ತು ನಕಲಿ ಮದ್ಯವಾಗಿರುತ್ತದೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ, ವಾಹನ ಹಾಗೂ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:19.02.2008 ಮತ್ತು 21.08.2008ರ ಪತ್ರಗಳ ಮೂಲಕ ಕೋರಿರುತ್ತಾರೆ.

ಅದರಂತೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡವಳಿಗಳನ್ನು ಕೈಗೊಂಡಿದ್ದು, ಮದ್ಯವನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:06.10.2008 ರಂದು ಸರ್ಕಾರಕ್ಕೆ ಈಗಾಗಲೇ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಸೆಂಟ್ರಲ್) ಇವರು ನೀಡಿರುವ "ಬಿ" ವಹಿಯಲ್ಲಿ ಟಾಟಾ ಸಿಯಾರ ನೊಂದಣಿ ಸಂಖ್ಯೆ: ಕೆಎ–01/ಎಂ–8825 ಗೆ ಸಂಬಂಧಿಸಿದಂತೆ ಶ್ರೀ ಲಕ್ಷ್ಮೀಚಂದ್ರರಾಜ್ ಪಾಲ್ ಟಿ., ಮೆ: ಬಾಂಬೆ ಎಲೆಕ್ಟ್ರಿಕಲ್ಸ್, ನಂ.4, 1ನೇ ಫ್ಲೋರ್, ಜೆ.ಸಿ.ರಸ್ತೆ, ಬೆಂಗಳೂರು–02 ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:20.09.2008ರಂದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆ ಮೂಲಕ ನೀಡಲಾಗಿತ್ತು.

ಕಾರಣ ಕೇಳುವ ನೋಟೀಸ್ ವಾಹನದ ಮಾಲೀಕರು ಮೇಲ್ಕಂಡ ವಿಳಾಸದಲ್ಲಿ ಲಭ್ಯವಿರದ ಕಾರಣ ಹಿಂತಿರುಗಿ ಬಂದಿರುತ್ತದೆ. ಇದುವರೆವಿಗೂ ವಾಹನದ ಬಿಡುಗಡೆಗೆ ಕೋರಿ ಯಾರು ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಟಾಟಾ ಸಿಯಾರ ನೊಂದಣಿ ಸಂಖ್ಯೆ: ಕೆಎ–01/ಎಂ–8825 ವಾಹನದಲ್ಲಿ ದಿನಾಂಕ:04.01.2008ರಂದು ಅಕ್ರಮವಾಗಿ ಮದ್ಯಸಾರ ಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಹಾಗೂ ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಅದರ ಬಿಡಿಭಾಗಗಳು ತುಕ್ಕುಹಿಡಿದು ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/186/2007–08, ದಿನಾಂಕ:24ನೇ ಫೆಬ್ರವರಿ, 2009**

ಡಾ: ವೈ. ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ಕೊಪ್ಪ ಪೊಲೀಸ್ ಠಾಣೆ, ಮದ್ದೂರು ತಾಲ್ಲೂಕು ಇವರ ಕ್ರೈಂ ಸಂಖ್ಯೆ: 02/2008, ದಿನಾಂಕ:04.01.2008ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಟಾಟಾ ಸಿಯಾರ ನೊಂದಣಿ ಸಂಖ್ಯೆ: ಕೆಎ–01/ಎಂ–8825 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:24.02.2009ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಎಕ್ಸೈಜ್, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.231

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**

**ಡಿಟಿಸಿಆರ್/209/2007–08, ದಿನಾಂಕ:3ನೇ ಮಾರ್ಚ್, 2009**

**ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಪೊಲೀಸ್ ಠಾಣೆ, ಮಂಡ್ಯ ಇವರ ಕ್ರೈಂ ಸಂಖ್ಯೆ:78/2008, ದಿನಾಂಕ:03.03.2008**

| **ಪಿರ್ಯಾದುದಾರರು** | **ಆರೋಪಿ** |
|---|---|
| ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಪೊಲೀಸ್ ಠಾಣೆ, ಮಂಡ್ಯ. | 1) ವೆಂಕಟೇಗೌಡ ಬಿನ್ ಲೇಟ್ ಜವರೇಗೌಡ<br>2) ನಾಗರಾಜು ಬಿನ್ ಮಾದೇಗೌಡ<br>3) ಶಿವಣ್ಣ ಬಿನ್ ಜವನಪ್ಪ<br>4) ರಾಮಣ್ಣ ಬಿನ್ ಲೇಟ್ ರಾಮಣ್ಣ<br>5) ತಿಮ್ಮೇಗೌಡ ಬಿನ್ ಕೊರಮ ನಿಂಗ್ರಯ್ಯಶೆಟ್ಟಿ<br>6) ಜಯರಾಮು<br>7) ಶಿವರಾಜು (ಉ) ಪಿಕೀ<br>8) ಶಶಿ<br>9) ಕೃಷ್ಣ<br>10) ಸಿದ್ದೇಗೌಡ (ಉ) ಸಿದ್ದ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:03.03.2008ರಂದು ರಾತ್ರಿ 01–30 ಗಂಟೆ ಸಮಯದಲ್ಲಿ ಮಂಡ್ಯ ಗ್ರಾಮಾಂತರ ಠಾಣಾ ವ್ಯಾಪ್ತಿ ಹಳುವಾಡಿ ಗ್ರಾಮದ ಜಯರಾಮುರವರ ಬಾಬ್ತು ಹಂದಿ ಶೆಡ್‌ನಲ್ಲಿ ಅಕ್ರಮವಾಗಿ ನಕಲಿ ಮದ್ಯ ತಯಾರಿಸಿ, ದಾಸ್ತಾನು ಮಾಡಿ ಮಾರಾಟ

ಮಾಡುವ ಸಲುವಾಗಿ ಕವಾಸಕಿ ಬಜಾಜ್ ಬಾಕ್ಸರ್ ಸಂಖ್ಯೆ: ಕೆಎ-03/ಇಜಿ-7572 ಮತ್ತು ಟಿವಿಎಸ್ ವಿಕ್ಟರ್ ಜಿಎಕ್ಸ್ ಸಂಖ್ಯೆ: ಕೆಎ-02/ಇಎಸ್-3156 ವಾಹನಗಳಲ್ಲಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಫಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 13, 13(ಎಫ್), 14, 32, 34, 38(ಎ), 43(ಎ) ಮತ್ತು ಐ.ಪಿ.ಸಿ. ಸೆಕ್ಷನ್ 274, 308, 420 ಕೂಡ 34ರ ರೀತ್ಯಾ ಅಪರಾಧವಾದ್ದರಿಂದ ಮೇಲ್ಕಂಡ ವಾಹನಗಳು, ನಕಲಿ ಮದ್ಯ ಹಾಗೂ ನಕಲಿ ಮದ್ಯ ತಯಾರಿಸಲು ಬಳಸುವ ಇತರೇ ವಸ್ತುಗಳನ್ನು ಪಂಚನಾಮೆಯಡಿಯಲ್ಲಿ ಅಮಾನತ್ತುಪಡಿಸಿಕೊಂಡು ಈ ಬಗ್ಗೆ ಕ್ರೈಂ ಸಂಖ್ಯೆ: 78/2008ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ವಾಹನಗಳು, ಮದ್ಯ ಹಾಗೂ ಇತರೇ ಅಬಕಾರಿ ವಸ್ತುಗಳನ್ನು ಹಸ್ತಾಂತರಿಸಲು ಈ ಪ್ರಾಧಿಕಾರದ ಅನುಮತಿ ಪಡೆದು ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ಅಬಕಾರಿ ಉಪ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಪೂರ್ವ ಮತ್ತು ಪಶ್ಚಿಮ) ಇವರುಗಳಿಂದ ವಾಹನಗಳ ಮಾಲೀಕತ್ವದ ವಿವರವನ್ನೊಳಗೊಂಡ "ಬಿ" ವಹಿಗಳನ್ನು ಪಡೆದು ಮೊಕದ್ದಮೆಯ ದಾಖಲಾತಿಗಳೊಂದಿಗೆ ವಾಹನಗಳು, ನಕಲಿ ಮದ್ಯ ಹಾಗೂ ನಕಲಿ ಮದ್ಯ ತಯಾರಿಸಲು ಬಳಸುವ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:16.06.2008ರ ಪತ್ರದ ಮೂಲಕ ಕೋರಿರುತ್ತಾರೆ.

ಅದರಂತೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡವಳಿಗಳನ್ನು ಕೈಗೊಂಡಿದ್ದು, ನಕಲಿ ಮದ್ಯ ಮತ್ತು ನಕಲಿ ಮದ್ಯ ತಯಾರಿಸಲು ಬಳಸುವ ವಸ್ತುಗಳನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:06.10.2008 ರಂದು ಸರ್ಕಾರಕ್ಕೆ ಈಗಾಗಲೇ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಸಹಾಯಕ ಪ್ರಾದೇಶಿಕ ಅಧಿಕಾರಿಗಳು, ಬೆಂಗಳೂರು (ಪೂರ್ವ) ಇವರು ನೀಡಿರುವ "ಬಿ" ವಹಿ ರೀತ್ಯಾ ಬಜಾಜ್ ಕವಾಸಕಿ ಬಾಕ್ಸರ್ ಸಂಖ್ಯೆ: ಕೆಎ-03/ಇಜಿ-7572 ವಾಹನದ ಮಾಲೀಕರಾದ ಶ್ರೀ ಬಿ.ಎನ್. ನಾರಾಯಣಸ್ವಾಮಿ ಬಿನ್ ನಾರಾಯಣಪ್ಪ, ಕಾಡುಗೋಡಿ ಪಾಲಿನೇಷನ್ ಡಿಣ್ಣೂರು, ಬೆಂಗಳೂರು-67 ಇವರಿಗೂ ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಪಶ್ಚಿಮ) ಇವರು ನೀಡಿರುವ "ಬಿ" ವಹಿ ರೀತ್ಯಾ ಟಿ.ವಿ.ಎಸ್. ವಿಕ್ಟರ್ ಜಿಎಕ್ಸ್ ಸಂಖ್ಯೆ: ಕೆಎ-02/ಇಎಸ್-3156 ವಾಹನದ ಮಾಲೀಕರಾದ ಶ್ರೀ ಜೆ.ಹೆಚ್. ಪುಟ್ಟಸ್ವಾಮಿ ಬಿನ್ ಹುಟ್ಟಚನ್ನ, ನಂ.ಎಲ್ಎಫ್-58/11, ಪಿಡಬ್ಲ್ಯೂಡಿ ಕ್ವಾಟ್ರಸ್, ನಂದಿನಿ ಲೇಔಟ್, ಇವರಿಗೆ ದಿನಾಂಕ:27.09.2008ರಂದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರನ್ವಯ ಕಾರಣ ಕೇಳುವ ನೋಟೀಸ್‌ಗಳನ್ನು ನೋಂದಣಿ ಅಂಚೆ ಮೂಲಕ ನೀಡಲಾಗಿತ್ತು.

ಕಾರಣ ಕೇಳುವ ನೋಟೀಸ್‌ಗಳು ವಾಹನದ ಮಾಲೀಕರು ಮೇಲ್ಕಂಡ ವಿಳಾಸದಲ್ಲಿ ಲಭ್ಯವಿರದ ಕಾರಣ ಹಿಂತಿರುಗಿ ಬಂದಿರುತ್ತದೆ.

ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರು ದಿನಾಂಕ:03.02.2009ರ ಪತ್ರದ ಮೂಲಕ ಟಿ.ವಿ.ಎಸ್. ವಿಕ್ಟರ್ ಜಿಎಕ್ಸ್ ಸಂಖ್ಯೆ: ಕೆಎ-02/ಇಎಸ್-3156 ವಾಹನದ ಮಾಲೀಕರಾದ ಶ್ರೀ ಜೆ.ಹೆಚ್. ಪುಟ್ಟಸ್ವಾಮಿ ಬಿನ್ ಹುಟ್ಟಚನ್ನ ಇವರಿಗೆ ಕಾರಣ ಕೇಳುವ ನೋಟೀಸನ್ನು ದಿನಾಂಕ:29.01.2009ರಂದು ಜಾರಿ ಮಾಡಿದ್ದು, ಸದರಿಯವರು ವಾಹನವನ್ನು ಧನಂಜಯ ಬಿನ್ ತೊರೇಗೌಡ, ಅರಳುಸಂದ್ರ, ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ ಇವರಿಗೆ ಮಾರಾಟ ಮಾಡಿರುವುದಾಗಿ ತಿಳಿಸಿ, ವಾಹನದ ಬಗ್ಗೆ ಕಾನೂನು ರೀತ್ಯಾ ಕ್ರಮ ಕೈಗೊಳ್ಳಲು ತಕರಾರು ಏನು ಇಲ್ಲವೆಂದು ತಿಳಿಸಿರುತ್ತಾರೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ದಿನಾಂಕ:03.03.2008ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹಾಗೂ ನಕಲಿ ಮದ್ಯ ತಯಾರಿಸಲು ಬಳಸುವ ವಸ್ತುಗಳನ್ನು ಹೊಂದಿ ಸಾಗಾಣಿಕೆ ಮಾಡುವ ಸಲುವಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಕವಾಸಕಿ ಬಜಾಜ್ ಬಾಕ್ಸರ್ ಸಂಖ್ಯೆ: ಕೆಎ-03/ಇಜಿ-7572 ಮತ್ತು ಟಿವಿಎಸ್ ವಿಕ್ಟರ್ ಜಿಎಕ್ಸ್ ಸಂಖ್ಯೆ: ಕೆಎ-02/ಇಎಸ್-3156 ವಾಹನಗಳನ್ನು ಉಪಯೋಗಿಸಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ವಾಹನಗಳನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ ವಾಹನಗಳನ್ನು ಚಾಲನೆಯಿಲ್ಲದೆ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಹಾಗೂ ಬಿಡಿಭಾಗಗಳು ತುಕ್ಕುಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಈ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನಗಳನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/209/2007-08, ದಿನಾಂಕ:3ನೇ ಮಾರ್ಚ್, 2009**

ಡಾ: ವೈ. ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಪೋಲೀಸ್ ಠಾಣೆ, ಇವರ ಕ್ರೈಂ ಸಂಖ್ಯೆ: 78/2008, ದಿನಾಂಕ:03.03.2008ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಕವಾಸಕಿ ಬಜಾಜ್ ಬಾಕ್ಸರ್ ಸಂಖ್ಯೆ: ಕೆಎ-03/ಇಜಿ-7572 ಮತ್ತು

ಟಿವಿಎಸ್ ವಿಕ್ಟರ್ ಜಿಎಕ್ಸ್ ಸಂಖ್ಯೆ:ಕೆಎ–02/ಇಎಸ್–3156 ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:03.03.2009ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಎಕ್ಸೈಜ್, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.269

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ ಡಿಟಿಸಿಆರ್/91/2007–08, ದಿನಾಂಕ:3ನೇ ಮಾರ್ಚ್, 2009**

**ಅಬಕಾರಿ ಉಪನಿರೀಕ್ಷಕರು, ಪಾಂಡವಪುರ ವಲಯ, ಪಾಂಡವಪುರ ಇವರ ಪ್ರ.ಮಾ.ವ. ಸಂಖ್ಯೆ:01/2007–08, ದಿನಾಂಕ:19.12.2007**

| **ಪಿರ್ಯಾದುದಾರರು** | **ಆರೋಪಿ** |
|---|---|
| ಅಬಕಾರಿ ನಿರೀಕ್ಷಕರು, ಪಾಂಡವಪುರ ವಲಯ, ಪಾಂಡವಪುರ. | 1) ಶ್ರೀಧರ್ ಬಿನ್ ಶಿವರಾಜು, 25 ವರ್ಷ, 3ನೇ ಕ್ರಾಸ್, ಜಯಲಕ್ಷ್ಮೀ ಟಾಕೀಸ್ ಹಿಂಭಾಗ, ಹೂವಿನ ಸರ್ಕಲ್, ಮಂಡ್ಯ.<br>2) ಟಿ. ಲೋಕೇಶ್ ಬಿನ್ ತಮ್ಮಣ್ಣ, 28 ವರ್ಷ, ತ್ಯಾಗರಾಜ ಕಾಲೋನಿ, ಪಾಂಡವಪುರ ಟೌನ್. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:19.12.2007ರಂದು ರಾತ್ರಿ 09–00 ಗಂಟೆ ಸಮಯದಲ್ಲಿ ಪಾಂಡವಪುರ ಟೌನ್‌ನಲ್ಲಿರುವ ಪಾಂಡವಪುರ ಬಸ್‌ನಿಲ್ದಾಣದ ಮುಂಭಾಗದಲ್ಲಿ ಅಕ್ರಮವಾಗಿ 43.200 ಲೀ ನಕಲಿ ಮದ್ಯವನ್ನು ಮಾರುತಿ 800 ಕಾರ್ ನೊಂದಣಿ ಸಂಖ್ಯೆ: ಸಿಎಎನ್–4683 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 13(ಎ) ಮತ್ತು 14ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 32, 34, 38(ಎ), ಮತ್ತು 43 ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಹಾಗೂ ನಕಲಿ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತುಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ. ಸಂಖ್ಯೆ: 01/2007–08 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡು ಬಂದಿದ್ದು ಅವು ಭಾರತ ಮಾನಕ ಬ್ಯೂರೋದ ಮಾನಕಕ್ಕೆ ಅನುಗುಣವಾಗಿಲ್ಲದಿರುವುದರಿಂದ ಅವು ನಕಲಿ ಮದ್ಯವಾಗಿರುತ್ತವೆ ಎಂದು ರಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ, ವಾಹನ ಹಾಗೂ ನಕಲಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:13.01.2009ರ ಪತ್ರದ ಮೂಲಕ ಕೋರಿರುತ್ತಾರೆ.

ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ದಕ್ಷಿಣ) ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ಸಂಖ್ಯೆ: ಸಿಎಎನ್–4683 ಗೆ ಸಂಬಂಧಿಸಿದಂತೆ ಶ್ರೀಮತಿ ಕೆ. ಕಲಾ ಕೋಂ ಹನುಮಯ್ಯ, ನಂ.292, 2ನೇ ಮುಖ್ಯರಸ್ತೆ, 8ನೇ ಬ್ಲಾಕ್, ಜಯನಗರ, ಬೆಂಗಳೂರು–82 ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:27.09.2008 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆ ಮೂಲಕ ನೀಡಲಾಗಿತ್ತು.

ಕಾರಣ ಕೇಳುವ ನೋಟೀಸ್ ವಾಹನದ ಮಾಲೀಕರು ಮೇಲ್ಕಂಡ ವಿಳಾಸದಲ್ಲಿ ಲಭ್ಯವಿರದ ಕಾರಣ ಹಿಂತಿರುಗಿ ಬಂದಿರುತ್ತದೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಮಾರುತಿ 800 ಕಾರ್ ನೋಂದಣಿ ಸಂಖ್ಯೆ: ಸಿಎಎನ್–4683 ವಾಹನದಲ್ಲಿ ದಿನಾಂಕ:19.12.2007ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ವಾಹನಗಳನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೆ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ

ದತ್ತವಾಗಿರುವುದರಿಂದ ಮೇಲ್ಕಂಡ ವಾಹನ ಮತ್ತು ನಕಲಿ ಮದ್ಯವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/91/2007–08, ದಿನಾಂಕ:3ನೇ ಮಾರ್ಚ್, 2009**

ಡಾ: ವೈ. ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು, ಪಾಂಡವಪುರ ವಲಯ, ಪಾಂಡವಪುರ ಇವರ ಪ್ರ.ಮಾ.ವ. ಸಂಖ್ಯೆ: 01/2007–08, ದಿನಾಂಕ:19.12.2007ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಮಾರುತಿ 800 ಕಾರ್ ನೊಂದಣಿ ಸಂಖ್ಯೆ: ಸಿಎಎನ್–4683 ವಾಹನ ಮತ್ತು 43.200 ಲೀ ನಕಲಿ ಮದ್ಯವನ್ನು (ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:03.03.2009ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಎಕ್ಸೈಜ್, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.270

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ ಡಿಟಿಸಿಆರ್/15/2008–09, ದಿನಾಂಕ:3ನೇ ಮಾರ್ಚ್, 2009**

**ಅಬಕಾರಿ ಉಪ ನಿರೀಕ್ಷಕರು–1, ಶ್ರೀರಂಗಪಟ್ಟಣ ವಲಯ, ಶ್ರೀರಂಗಪಟ್ಟಣ ಇವರ ಪ್ರ.ಮಾ.ವ. ಸಂಖ್ಯೆ:01/2008–09, ದಿನಾಂಕ:19.07.2008**

| **ಪಿರ್ಯಾದುದಾರರು** | **ಆರೋಪಿ** |
|---|---|
| ಅಬಕಾರಿ ಉಪನಿರೀಕ್ಷಕರು–1,<br>ಶ್ರೀರಂಗಪಟ್ಟಣ ವಲಯ, ಶ್ರೀರಂಗಪಟ್ಟಣ. | ತಲೆಮರೆಸಿಕೊಂಡಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:19.07.2008ರಂದು ರಾತ್ರಿ 09–30 ಗಂಟೆ ಸಮಯದಲ್ಲಿ ಶ್ರೀರಂಗಪಟ್ಟಣ ತಾಲ್ಲೂಕು ದರಸಗುಪ್ಪೆ ಗ್ರಾಮದ ಬಸ್ ನಿಲ್ದಾಣದ ಹತ್ತಿರ ಅಕ್ರಮವಾಗಿ 43.200 ಲೀ. ನಕಲಿಮದ್ಯವನ್ನು ಮಾರುತಿ ವ್ಯಾನ್ ಸಂಖ್ಯೆ: ಸಿಕೆಆರ್–9 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 14ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 34, 38(ಎ), 43 ಮತ್ತು 43(ಎ) ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಹಾಗೂ ನಕಲಿ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತುಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ. ಸಂಖ್ಯೆ: 01/2008–09 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡು ಬಂದಿದ್ದು ಅವು ಭಾರತ ಮಾನಕ ಬ್ಯೂರೋದ ಮಾನಕಕ್ಕೆ ಅನುಗುಣವಾಗಿಲ್ಲದಿರುವುದರಿಂದ ಅವು ನಕಲಿ ಮದ್ಯವಾಗಿರುತ್ತವೆ ಎಂದು ರಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ, ವಾಹನ ಹಾಗೂ ನಕಲಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:05.01.2009ರ ಪತ್ರದ ಮೂಲಕ ಕೋರಿರುತ್ತಾರೆ.

ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಪೂರ್ವ) ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ಸಂಖ್ಯೆ: ಸಿಕೆಆರ್–9 ಗೆ ಸಂಬಂಧಿಸಿದಂತೆ ಶ್ರೀ ಅಬ್ದುಲ್ ಮೌಲಾ ಬಿನ್ ಅಬ್ದುಲ್ ಭಷೀರ್, ನಂ.48, 1ನೇ ಕ್ರಾಸ್, ವಿನಾಯಕನಗರ, ಬೆಂಗಳೂರು–25, ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:03.12.2008ರಂದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆ ಮೂಲಕ ನೀಡಲಾಗಿತ್ತು.

ಕಾರಣ ಕೇಳುವ ನೋಟೀಸ್ ವಾಹನದ ಮಾಲೀಕರು ಮೇಲ್ಕಂಡ ವಿಳಾಸದಲ್ಲಿ ಲಭ್ಯವಿರದ ಕಾರಣ ಹಿಂತಿರುಗಿ ಬಂದಿರುತ್ತದೆ. ಹಾಗೂ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಪೂರ್ವ) ಇವರು ನೀಡಿರುವ "ಬಿ" ವಹಿಯಲ್ಲಿ ಮೇಲ್ಕಂಡ ವಾಹನದ ಸಿ.ಸಿ.ಯನ್ನು ದಿನಾಂಕ:17.08.2004ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಉತ್ತರ) ಇವರಿಗೆ ಕಳುಹಿಸಿರುವುದಾಗಿ ತಿಳಿಸಿದ ಹಿನ್ನೆಲೆಯಲ್ಲಿ ಸದರಿ ಅಧಿಕಾರಿಗಳಿಗೆ ದಿನಾಂಕ:03.12.2008ರಂದು ವಾಹನದ "ಬಿ" ವಹಿ ಕೋರಿ ಪತ್ರ ಬರೆಯಲಾಗಿತ್ತು.

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಉತ್ತರ) ಇವರು ದಿನಾಂಕ:22.12.2008ರ ಪತ್ರದ ಮೂಲಕ ವಾಹನ ಸಂಖ್ಯೆ: ಸಿಕೆಆರ್–9 ವಾಹನದ ಬಗ್ಗೆ ಕಛೇರಿ ದಾಖಲಾತಿಗಳನ್ನು ಪರಿಶೀಲಿಸಿದ್ದು ಸದರಿ ವಾಹನದ ದಾಖಲಾತಿಗಳು ಇದುವರೆವಿಗೂ ಮಾಲೀಕತ್ವ ವರ್ಗಾವಣೆಗಾಗಲೀ ಅಥವಾ ವಿಳಾಸ ಬದಲಾವಣೆಗಾಗಲಿ ವಲಸೆ ಬಂದಿರುವುದಿಲ್ಲವೆಂದು ತಿಳಿಸಿರುತ್ತಾರೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಮಾರುತಿ ವ್ಯಾನ್ ಸಂಖ್ಯೆ: ಸಿಕೆಆರ್–9 ವಾಹನದಲ್ಲಿ ದಿನಾಂಕ:19.07.2008ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೆ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನ ಮತ್ತು ನಕಲಿ ಮದ್ಯವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/15/2008–09, ದಿನಾಂಕ:3ನೇ ಮಾರ್ಚ್, 2009**

ಡಾ: ವೈ. ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪನಿರೀಕ್ಷಕರು–1, ಶ್ರೀರಂಗಪಟ್ಟಣ ವಲಯ, ಶ್ರೀರಂಗಪಟ್ಟಣ ಇವರ ಪ್ರ.ಮಾ.ವ. ಸಂಖ್ಯೆ: 01/2008–09, ದಿನಾಂಕ:19.07.2008ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಮಾರುತಿ ವ್ಯಾನ್ ನೊಂದಣಿ ಸಂಖ್ಯೆ: ಸಿಕೆಆರ್–9 ವಾಹನ ಮತ್ತು 43.200 ಲೀ ನಕಲಿ ಮದ್ಯವನ್ನು (ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:03.03.2009ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಎಕ್ಸೈಜ್, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.271

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಡಿಟಿಸಿಆರ್/179/2007–08, ದಿನಾಂಕ:6ನೇ ಮಾರ್ಚ್, 2009**

**ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಪೊಲೀಸ್ ಠಾಣೆ, ಕೆ.ಆರ್. ಪೇಟೆ, ಇವರ ಪ್ರ.ಮಾ.ವ. ಸಂಖ್ಯೆ:113/2007, ದಿನಾಂಕ:19.07.2007**

| **ಪಿರ್ಯಾದುದಾರರು** | **ಆರೋಪಿ** |
|---|---|
| ಆರಕ್ಷಕ ಉಪ ನಿರೀಕ್ಷಕರು, ಗ್ರಾಮಾಂತರ ಪೊಲೀಸ್ ಠಾಣೆ, ಕೆ.ಆರ್.ಪೇಟೆ. | ಗಂಗಾಧರ್ ಬಿನ್ ಬೋರೇಗೌಡ, 35 ವರ್ಷ, ವಾಹನ ಚಾಲಕ, ಒಕ್ಕಲಿಗ ಜನಾಂಗ, ಮತ್ತಿಕೆರೆ ಗ್ರಾಮ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:19.07.2007ರಂದು ಸಂಜೆ ಸುಮಾರು 6–00 ಗಂಟೆ ಸಮಯದಲ್ಲಿ ಕೆ.ಆರ್.ಪೇಟೆ ತಾಲ್ಲೂಕು ಬೂಕನಕೆರೆ ಹೋಬಳಿ ಬಲ್ಲೇನಹಳ್ಳಿ ಬಸ್‌ನಿಲ್ದಾಣದ ಹತ್ತಿರ ಅಕ್ರಮವಾಗಿ 24.300 ಲೀ ನಕಲಿ ಮದ್ಯವನ್ನು ಆಟೋ ನೊಂದಣಿ ಸಂಖ್ಯೆ: ಕೆಎ–11/4795 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 36ರ ರೀತ್ಯಾ ಅಪರಾಧವಾದ್ದರಿಂದ ವಾಹನ ಹಾಗೂ ನಕಲಿ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತುಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ. ಸಂಖ್ಯೆ: 113/2007 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡು ಬಂದಿದ್ದು ಅವು ಭಾರತ ಮಾನಕ ಬ್ಯೂರೋದ ಮಾನಕಕ್ಕೆ ಅನುಗುಣವಾಗಿಲ್ಲದಿರುವುದರಿಂದ ಅವು ನಕಲಿ ಮದ್ಯವಾಗಿರುತ್ತವೆ ಎಂದು ರಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ, ವಾಹನ ಹಾಗೂ ನಕಲಿ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:29.03.2008ರ ಪತ್ರದ ಮೂಲಕ ಕೋರಿರುತ್ತಾರೆ.

ಅದರಂತೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು, ನಕಲಿ ಮದ್ಯವನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:06.10.2008 ರಂದು ಸರ್ಕಾರಕ್ಕೆ ಈಗಾಗಲೇ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ವಾಹನಕ್ಕೆ ಸಂಬಂಧಪಟ್ಟಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಡ್ಯ ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ಸಂಖ್ಯೆ:ಕೆಎ–11/4795 ಗೆ ಸಂಬಂಧಿಸಿದಂತೆ ಶ್ರೀಮತಿ ಮರಿಬಸವಮ್ಮ ಕೋಂ ಕಾಳಪ್ಪ, ಮಾಕವಳ್ಳಿ ಗ್ರಾಮ, ಕೆ.ಆರ್.ಪೇಟೆ ತಾಲ್ಲೂಕು ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:01.12.2008 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆ ಮೂಲಕ ಹಾಗೂ ಅಬಕಾರಿ ನಿರೀಕ್ಷಕರು, ಕೆ.ಆರ್.ಪೇಟೆ ವಲಯ ಇವರ ಮುಖಾಂತರ ಜಾರಿ ಮಾಡಿಸಲಾಗಿತ್ತು.

ಕಾರಣ ಕೇಳುವ ನೋಟೀಸ್ ಮೇಲ್ಕಂಡ ವಿಳಾಸದಲ್ಲಿ ಸ್ವೀಕೃತಿಯಾಗಿದ್ದು, ಅಬಕಾರಿ ನಿರೀಕ್ಷಕರು, ಕೆ.ಆರ್.ಪೇಟೆ ವಲಯ ಇವರು ಸಹ ವಾಹನದ ಮಾಲೀಕರಿಗೆ ಖುದ್ದಾಗಿ ಜಾರಿ ಮಾಡಿರುತ್ತಾರೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಆಟೋ ಸಂಖ್ಯೆ: ಕೆಎ–11/4795 ವಾಹನದಲ್ಲಿ ದಿನಾಂಕ:19.07.2007ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೆ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/179/2007–08, ದಿನಾಂಕ:6ನೇ ಮಾರ್ಚ್, 2009**

ಡಾ: ವೈ. ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪನಿರೀಕ್ಷಕರು, ಗ್ರಾಮಾಂತರ ಪೊಲೀಸ್ ಠಾಣೆ, ಕೆ.ಆರ್.ಪೇಟೆ, ಇವರ ಪ್ರ.ಮಾ.ವ. ಸಂಖ್ಯೆ: 113/2007, ದಿನಾಂಕ:19.07.2007ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಆಟೋ ನೊಂದಣಿ ಸಂಖ್ಯೆ: ಕೆಎ–11/4795 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:06.03.2009ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಎಕ್ಸೈಜ್, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.272

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಡಿಟಿಸಿಆರ್/62/2008–09, ದಿನಾಂಕ:3ನೇ ಮಾರ್ಚ್, 2009**

**ಅಬಕಾರಿ ಉಪ ನಿರೀಕ್ಷಕರು (ಪ್ರ), ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್‌ರವರ ಕಛೇರಿ, ಮಂಡ್ಯ ಜಿಲ್ಲೆ, ಮಂಡ್ಯ ಇವರ**
**ಪ್ರ.ಮಾ.ವ. ಸಂಖ್ಯೆ:01/2008–09, ದಿನಾಂಕ:05.07.2008**

| **ಪಿರ್ಯಾದುದಾರರು** | **ಆರೋಪಿ** |
| --- | --- |
| ಅಬಕಾರಿ ಉಪ ನಿರೀಕ್ಷಕರು, ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್‌ರವರ ಕಛೇರಿ, ಮಂಡ್ಯ ಜಿಲ್ಲೆ, ಮಂಡ್ಯ. | ತಲೆಮರೆಸಿಕೊಂಡಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:08.07.2008ರಂದು ರಾತ್ರಿ 11–30 ಗಂಟೆ ಸಮಯದಲ್ಲಿ ಮಂಡ್ಯ ಉಮ್ಮಡಹಳ್ಳಿಗೆ ಹೋಗುವ ರಸ್ತೆಯ ಅಂಚಿನಲ್ಲಿರುವ ನಿರಂಜನ ಕುಟೀರದ ಎದುರಿನ ರಸ್ತೆಯಲ್ಲಿ ಅಕ್ರಮವಾಗಿ 12.960 ಲೀ. ನಕಲಿ ಮದ್ಯವನ್ನು ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ–05/ಎಸ್–9343 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆ ಮಾಡಿದ ಪಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, ಮತ್ತು14ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 32, 34, 43 ಮತ್ತು 43(ಎ) ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಹಾಗೂ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತುಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ. ಸಂಖ್ಯೆ:01/2008–09 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡು ಬಂದಿದ್ದು ಅವುಗಳು ಬ್ಯೂರೋ ಆಫ್ ಇಂಡಿಯನ್ ಸ್ಟ್ಯಾಂಡರ್ಡ್ಸ್ ನಿಗದಿಪಡಿಸಿರುವ ಮಾದರಿ ಗುಣಲಕ್ಷಣಗಳಿಗೆ ಅನುಗುಣವಾಗಿಲ್ಲದಿರುವುದರಿಂದ ಅವು ನಕಲಿ ಮದ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ, ವಾಹನ ಹಾಗೂ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:23.12.2008ರ ಪತ್ರದ ಮೂಲಕ ಕೋರಿರುತ್ತಾರೆ.

ಅದರಂತೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಗಳನ್ನು ಕೈಗೊಂಡಿದ್ದು, ನಕಲಿ ಮದ್ಯವನ್ನು ತನ್ನದೆಂದು ಕೋರಿ ಯಾರು ಮುಂದೆ ಬಾರದ ಕಾರಣ ದಿನಾಂಕ:24.12.2008 ರಂದು ಸರ್ಕಾರಕ್ಕೆ ಈಗಾಗಲೇ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ದಕ್ಷಿಣ) ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ಸಂಖ್ಯೆ:ಕೆಎ–05/ಎಸ್–9343ಗೆ ಸಂಬಂಧಿಸಿದಂತೆ ಶ್ರೀ ಎಸ್.ವಿ. ಕುಲ್‌ಕನಿ ಬಿನ್ ವಿ.ಹೆಚ್. ಕುಲಕರ್ಣಿ, ನಂ.17, ವೈಕಾರ್ ಸುಪ್ರಾಜನಗರ, ಕೋಣನಕುಂಟೆ, ಕನಕಪುರ ರಸ್ತೆ, ಬೆಂಗಳೂರು ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:01.12.2008 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆ ಮೂಲಕ ಹಾಗೂ ಅಬಕಾರಿ ನಿರೀಕ್ಷಕರು, ಮಂಡ್ಯ ವಲಯ, ಮಂಡ್ಯ ಇವರ ಮುಖಾಂತರ ಜಾರಿ ಮಾಡಿಸಲಾಗಿತ್ತು.

ಶ್ರೀ ಎಸ್.ವಿ. ಕುಲ್‌ಕನಿ ಬಿನ್ ವಿ.ಹೆಚ್. ಕುಲಕರ್ಣಿ, ಇವರು ದಿನಾಂಕ:05.08.2002 ರ ಪತ್ರದ ಮೂಲಕ ಮೇಲ್ಕಂಡ ವಾಹನವನ್ನು ಶ್ರೀ ಡಿ.ಪಿ. ಕೃಷ್ಣ ಬಿನ್ ಪೆರುಮಾಳ ಎಂಬುವವರಿಗೆ ಮಾರಾಟ ಮಾಡಿರುವುದಾಗಿ ತಿಳಿಸಿ, ವಾಹನದ ಬಗ್ಗೆ ಕಾನೂನು ರೀತ್ಯಾ ಕ್ರಮ ಕೈಗೊಳ್ಳಲು ತಕರಾರು ಏನು ಇಲ್ಲವೆಂದು ತಿಳಿಸಿರುತ್ತಾರೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ–05/ಎಸ್–93943 ವಾಹನದಲ್ಲಿ ದಿನಾಂಕ:05.07.2008ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೆ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/62/2008–09, ದಿನಾಂಕ:3ನೇ ಮಾರ್ಚ್, 2009**

ಡಾ: ವೈ. ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪನಿರೀಕ್ಷಕರು (ಪ್ರಭಾರ), ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್‌ರವರ ಕಛೇರಿ, ಮಂಡ್ಯ ಜಿಲ್ಲೆ, ಮಂಡ್ಯ ಇವರ ಪ್ರ.ಮಾ.ವ. ಸಂಖ್ಯೆ: 01/2008–09, ದಿನಾಂಕ:05.07.2008ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ: ಕೆಎ–05/ಎಸ್–9343 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:03.03.2009ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಎಕ್ಸೈಜ್, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.273

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಡಿಟಿಸಿಆರ್/92/2007–08, ದಿನಾಂಕ:3ನೇ ಮಾರ್ಚ್, 2009**

**ಅಬಕಾರಿ ನಿರೀಕ್ಷಕರು (ಪ್ರ), ವಿಚಕ್ಷಣದಳ, ಮಂಡ್ಯ ಜಿಲ್ಲೆ, ಮಂಡ್ಯ ಇವರ ಪ್ರ.ಮಾ.ವ. ಸಂಖ್ಯೆ:04/2007–08, ದಿನಾಂಕ:28.12.2007**

| ಪಿರ್ಯಾದುದಾರರು | ಆರೋಪಿ |
|---|---|
| ಅಬಕಾರಿ ನಿರೀಕ್ಷಕರು, (ಪ್ರಭಾರ) ವಿಚಕ್ಷಣದಳ, ಮಂಡ್ಯ ಜಿಲ್ಲೆ, ಮಂಡ್ಯ. | 1) ಪ್ರಕಾಶ್ ಬಿನ್ ಲೇಟ್ ಕೃಷ್ಣಶೆಟ್ಟಿ<br>2) ಜಗದೀಶ್ ಅಲಿಯಾಸ್ ಭೋಜ ಬಿನ್ ಲೇಟ್ ವೆಂಕಟಪ್ಪ,<br>3) ಮಲ್ಲಯ್ಯ ಬಿನ್ ಬಸವಣ್ಣ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:28.12.2007ರಂದು ಮಧ್ಯಾಹ್ನ 12–30 ಗಂಟೆ ಸಮಯದಲ್ಲಿ ಮಂಡ್ಯ ತಾಲ್ಲೂಕು ಕೀಲಾರ ಗ್ರಾಮದ ಪ್ರಕಾಶ್ ಬಿನ್ ಲೇಟ್ ಕೃಷ್ಣಶೆಟ್ಟಿ ಇವರಿಗೆ ಸೇರಿದ ವಾಸದ ಮನೆಯಲ್ಲಿ ಅಕ್ರಮವಾಗಿ 69.120 ಲೀ ನಕಲಿ ಮದ್ಯ 15.000 ಲೀ ಬಲ್ಕ್ ಮದ್ಯ ಹಾಗೂ ಇತರೆ ಅಬಕಾರಿ ವಸ್ತುಗಳನ್ನು ಬಜಾಜ್ ಸ್ಕೂಟರ್ ಸಂಖ್ಯೆ: ಕೆಎ–01/ಕ್ಯೂ9924 ವಾಹನದಲ್ಲಿ ಸಾಗಾಣಿಕೆ ಮಾಡಲು ಬಳಸುತ್ತಿದ್ದುದನ್ನು ಪತ್ತೆ ಮಾಡಿದ ಫಿರ್ಯಾದುದಾರರು ಇದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 11, 13(1)(ಎ) ಮತ್ತು 14ರ ರೀತ್ಯಾ ಅಪರಾಧವಾಗಿದ್ದು, ಇದೇ ಕಾಯ್ದೆಯ ಕಲಂ 32, 34, 38(ಎ), 43 ಮತ್ತು 43(ಎ) ರೀತ್ಯಾ ಶಿಕ್ಷಾರ್ಹವಾದ್ದರಿಂದ ವಾಹನ ಹಾಗೂ ಮದ್ಯವನ್ನು ಪಂಚನಾಮೆಯಡಿಯಲ್ಲಿ ಅಮಾನತ್ತುಪಡಿಸಿಕೊಂಡು ಈ ಬಗ್ಗೆ ಪ್ರ.ಮಾ.ವ. ಸಂಖ್ಯೆ: 04/2007–08 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿದ ಮದ್ಯದ ಮಾದರಿ ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಅದರ ಪ್ರಕಾರ ಮಾದರಿ ಬಾಟಲುಗಳಲ್ಲಿ ಈಥೈಲ್ ಆಲ್ಕೋಹಾಲ್ ಕಂಡು ಬಂದಿದ್ದು ಅವು ಭಾರತದ ಮಾನಕ ಬ್ಯೂರೋಗೆ ಅನುಗುಣವಾಗಿರುವುದಿಲ್ಲ ಮತ್ತು ನಕಲಿ ಮದ್ಯವಾಗಿರುತ್ತವೆ ಎಂದು ರಸಾಯನ ತಜ್ಞರ ವರದಿಯಿಂದ ದೃಢಪಟ್ಟಿರುವುದರಿಂದ, ವಾಹನ ಹಾಗೂ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:21.01.2009ರ ಪತ್ರದ ಮೂಲಕ ಕೋರಿರುತ್ತಾರೆ.

ವಾಹನಕ್ಕೆ ಸಂಬಂಧಪಟ್ಟಂತೆ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು (ಸೆಂಟ್ರಲ್) ಇವರು ನೀಡಿರುವ "ಬಿ" ವಹಿಯಲ್ಲಿ ವಾಹನ ಸಂಖ್ಯೆ: ಕೆಎ–01/ಕ್ಯೂ9924 ಗೆ ಸಂಬಂಧಿಸಿದಂತೆ ಶ್ರೀ ಸಿ.ಎಲ್. ರಾಮ್‌ಕುಮಾರ್ ಬಿನ್ ಲಕ್ಷ್ಮೀನರಸಿಂಹಶೆಟ್ಟಿ, ನಂ.164/4, ಆರ್.ವಿ. ರಸ್ತೆ, ದೊಡ್ಡಮಾವಳ್ಳಿ, ಬೆಂಗಳೂರು–560004 ಇವರು ವಾಹನದ ಮಾಲೀಕರೆಂದು ತಿಳಿಸಿದ್ದು, ಸದರಿಯವರಿಗೆ ದಿನಾಂಕ:11.12.2008ರಂದು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೊಂದಣಿ ಅಂಚೆ ಮೂಲಕ ಕಳುಹಿಸಲಾಗಿತ್ತು.

ಕಾರಣ ಕೇಳುವ ನೋಟೀಸ್ ವಾಹನದ ಮಾಲೀಕರು ಮೇಲ್ಕಂಡ ವಿಳಾಸದಲ್ಲಿ ಲಭ್ಯವಿರದ ಕಾರಣ ಹಿಂತಿರುಗಿ ಬಂದಿರುತ್ತದೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಸ್ಕೂಟರ್ ಸಂಖ್ಯೆ: ಕೆಎ–01/ಕ್ಯೂ–9924 ವಾಹನದಲ್ಲಿ ದಿನಾಂಕ:28.12.2007ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ವಾಹನವನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ, ವಾಹನವನ್ನು ಚಾಲನೆಯಿಲ್ಲದೆ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನ ಮತ್ತು ನಕಲಿ ಮದ್ಯ ಮತ್ತು ಇತರೆ ಅಬಕಾರಿ ವಸ್ತುಗಳನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/92/2007–08, ದಿನಾಂಕ:3ನೇ ಮಾರ್ಚ್, 2009**

ಡಾ: ವೈ. ಮಂಜುನಾಥ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ) ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು (ಪ್ರಭಾರ), ವಿಚಕ್ಷಣದಳ, ಮಂಡ್ಯ ಜಿಲ್ಲೆ, ಮಂಡ್ಯ ಇವರ ಪ್ರ.ಮಾ.ವ. ಸಂಖ್ಯೆ: 04/2007–08, ದಿನಾಂಕ:28.12.2007ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಸ್ಕೂಟರ್ ಸಂಖ್ಯೆ: ಕೆಎ–01/ಕ್ಯೂ–9924 ವಾಹನ, 69.120 ಲೀ ನಕಲಿ ಮದ್ಯ 15.000 ಲೀ ಬಲ್ಕ್ ಮದ್ಯ ಹಾಗೂ ಇತರೆ ಅಬಕಾರಿ ವಸ್ತುಗಳನ್ನು (ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ:03.03.2009ರಂದು ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿ, ಬೆರಳಚ್ಚು ಮಾಡಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ ಮೂವತ್ತು (30) ದಿವಸಗಳ ನಂತರ ಜಾರಿಗೆ ಬರುವುದು.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್
ಎಕ್ಸೈಜ್, ಮಂಡ್ಯ ಜಿಲ್ಲೆ, ಮಂಡ್ಯ.

ಪಿ.ಆರ್.274

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ಕಛೇರಿ, ಬೆಂಗಳೂರು ಪ್ರಾಂತ, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು–560 018

**ಸಂಖ್ಯೆ: ಜೆಆರ್‌ಬಿ: ಎಲ್‌ಕ್ಯೂಡಿ:06:ಎಲ್‌ಹೆಚ್‌ಎಸ್:57:07–08, ದಿನಾಂಕ:28ನೇ ಫೆಬ್ರವರಿ, 2009**

**ವಿಷಯ:** ಅಗರಬತ್ತಿ ವರ್ಕರ್ಸ್ ಅಂಡ್ ಅದರ್ಸ್ ಹೌಸ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು. ಇದರಲ್ಲಿ ನೈಜ ಸದಸ್ಯರು ಇಲ್ಲದೆ ಇರುವುದರಿಂದ ಹಾಗೂ ಸಂಘದಲ್ಲಿ ಹಲವಾರು ಅವ್ಯವಹಾರಗಳು ನಡೆದಿರುವುದರಿಂದ ಆಡಳಿತ ಮಂಡಳಿಯು ಸಮರ್ಪಕವಾಗಿ ಕಾರ್ಯನಿರ್ವಹಿಸದಿರುವುದರಿಂದ ಸಂಘವನ್ನು ಸಮಾಪನೆ ಮಾಡುವ ಬಗ್ಗೆ.

**ಉಲ್ಲೇಖ:**
1) ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರ ಆದೇಶ ಸಂಖ್ಯೆ: ಆರ್‌ಸಿಎಸ್/ಎಲ್‌ಕ್ಯೂಡಿ/36/03–04, ದಿನಾಂಕ:06.11.2004.
2) ಮಾನ್ಯ ಸರ್ಕಾರದ ಕಾರ್ಯದರ್ಶಿ, ಸಹಕಾರ ಇಲಾಖೆ, ಕರ್ನಾಟಕ ಸರ್ಕಾರ ಇವರ ಮೇಲ್ಮನವಿ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ/24/ಸಿಎಪಿ/2007, ದಿನಾಂಕ:24.06.2007.
3) ಈ ಕಛೇರಿಯ ಆದೇಶದ ಸಂಖ್ಯೆ: ಜೆಆರ್‌ಬಿ/ ಎಲ್‌ಕ್ಯೂಡಿ/ಎಲ್‌ಹೆಚ್/5/57/07–08, ದಿನಾಂಕ:22.09.2007.
4) ಗೌರವ ಉಚ್ಛನ್ಯಾಯಾಲಯದ ಮೇಲ್ಮನವಿ ಆದೇಶ ಸಂಖ್ಯೆ:11642/2008 ದಿನಾಂಕ:02.12.2008.
5) ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಹಾಗೂ ಸಂಘದ ವಿಶೇಷಾಧಿಕಾರಿಗಳ ಪತ್ರದ ಸಂಖ್ಯೆ: ಸಅಅ/ಬೆಂಉತಾ/40/2008–09, ದಿನಾಂಕ:12.12.2008.
6) ಈ ಕಛೇರಿಯ ಆದೇಶದ ಕ್ರಮಸಂಖ್ಯೆ: ಜೆಆರ್‌ಬಿ/ಎಲ್‌ಕ್ಯೂಡಿ/05/ಎಲ್‌ಹೆಚ್‌ಎಸ್/57/2007–08, ದಿನಾಂಕ:03.01.2009.
7) ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಹಾಗೂ ಸಂಘದ ವಿಶೇಷಾಧಿಕಾರಿಗಳ ಪತ್ರದ ಸಂಖ್ಯೆ: ಸಅಅ/ಬೆಂಉತಾ/01/ವಿಅ/2007–08, ದಿನಾಂಕ:11.02.2009.

**ಪ್ರಸ್ತಾವನೆ:**

ಅಗರಬತ್ತಿ ವರ್ಕರ್ಸ್ ಅಂಡ್ ಅದರ್ಸ್ ಹೌಸ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು, ಈ ಸಂಘದಲ್ಲಿನ ಅವ್ಯವಹಾರಗಳನ್ನು ಪರಿಗಣಿಸಿ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 65 ರಡಿಯಲ್ಲಿ ಪರಿವೀಕ್ಷಣೆಯನ್ನು ನಡೆಸಿ ದಿನಾಂಕ:26.11.1997ರ ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ ರವರ ಆದೇಶದಲ್ಲಿ ಸಮಾಪನೆಗೊಳಿಸಲಾಗಿತ್ತು. ಗೌರವ ಉಚ್ಛ ನ್ಯಾಯಾಲಯದ ಆದೇಶದನ್ವಯ ಹಿಂದಿನ ಆಡಳಿತ ಮಂಡಳಿಗೆ ಅವಕಾಶ ನೀಡಿದ್ದು, ಸಹಕಾರ ಸಂಘಗಳ ನಿಬಂಧಕರ ಆದೇಶ ದಿನಾಂಕ:06.11.2004ರಂತೆ ಸಂಘವನ್ನು ಮತ್ತೊಮ್ಮೆ ಸಮಾಪನೆ ಮಾಡಲಾಗಿತ್ತು.

ಆದರೆ, ಆಡಳಿತ ಮಂಡಳಿಯ ನಿರ್ದೇಶಕರುಗಳು ಗೌರವ ಉಚ್ಛ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 1329/2005 ರನ್ವಯ ಸಮಾಪನಾ ಆದೇಶವನ್ನು ಪ್ರಶ್ನಿಸಿ ರಿಟ್ ಅರ್ಜಿ ಸಲ್ಲಿಸಿದ್ದರು. ಗೌರವ ಉಚ್ಛ ನ್ಯಾಯಾಲಯವು ರಿಟ್ ಅರ್ಜಿದಾರರ ಮನವಿಯನ್ನು ಪುರಸ್ಕರಿಸಿ ದಿನಾಂಕ:20.03.2006ರಂದು ಆದೇಶ ಹೊರಡಿಸಿ, 2ನೇ ಪ್ರತಿವಾದಿಗಳಾದ ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಇವರಿಗೆ ನಿರ್ದೇಶನ ನೀಡಿ ಸಂಘದ ವಿರುದ್ಧ ನಡೆಸಲಾದ ವಿಚಾರಣಾ ವರದಿಯನ್ನು ಪರಿಗಣಿಸಿ ಉದ್ದೇಶಿಸಲಾದ ಕ್ರಮವನ್ನು ಪುನರ್ ಪ್ರಾರಂಭಿಸಲು ಆದೇಶಿಸಲಾಗಿತ್ತು. ನಂತರ ದಿನಾಂಕ:24.02.2007ರಂದು ನಿಬಂಧಕರ ಆದೇಶದನ್ವಯ ಈ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೆಂಗಳೂರು 1ನೇ ವಲಯ, ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು.

ಈ ಸಂಘದ ಆಡಳಿತ ಮಂಡಳಿಯ ಸದಸ್ಯರು ಮೇಲ್ಕಂಡ ನಿಬಂಧಕರ ಆದೇಶವನ್ನು ಪ್ರಶ್ನಿಸಿ ಸಹಕಾರ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳ ಮುಂದೆ ಮೇಲ್ಮನವಿ ಸಲ್ಲಿಸಿದ್ದು, ಸದರಿ ಮೇಲ್ಮನವಿಯನ್ನು ಪುರಸ್ಕರಿಸಿ, ಸಹಕಾರ ಸಂಘಗಳ ನಿಬಂಧಕರ ದಿನಾಂಕ:24.02.2007ರ ಆದೇಶವನ್ನು ವಜಾ ಮಾಡಿರುತ್ತಾರೆ. ಆದರೆ ಸಂಘದ ಆಡಳಿತ ಮಂಡಳಿಯ ಅವಧಿಯು ದಿನಾಂಕ:31.03.2005ಕ್ಕೆ ಅಂತ್ಯಗೊಂಡು ಸಂಘದಲ್ಲಿ ಶೂನ್ಯತೆ ಉಂಟಾದ ಕಾರಣ ದಿನಾಂಕ:22.09.2007ರ ಆದೇಶದಲ್ಲಿ ಈ ಕಛೇರಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 31(1)ರಡಿಯಲ್ಲಿ ಸಂಘದ ಆಡಳಿತ ಮಂಡಳಿಯನ್ನು ರದ್ದುಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ರವರನ್ನು ವಿಶೇಷಾಧಿಕಾರಿಯಾಗಿ ನೇಮಿಸಲಾಗಿರುತ್ತದೆ.

ಈ ಸಂಘದ ವಿಶೇಷಾಧಿಕಾರಿಗಳು ಉಲ್ಲೇಖ (7)ರ ಪತ್ರದಲ್ಲಿ, ಸಂಘದಲ್ಲಿ ಲಭ್ಯವಿರುವ ಪುಸ್ತಕಗಳನ್ನು ಹಾಗೂ ಮೇಲಾಧಿಕಾರಿಗಳು ಹೊರಡಿಸಿರುವ ಆದೇಶಗಳು ಹಾಗೂ ನ್ಯಾಯಾಲಯದ ಆದೇಶಗಳನ್ನು ಪರಿಶೀಲಿಸಿ ಆಡಳಿತ ಮಂಡಳಿ ರಚಿಸಬೇಕೆ? ಅಥವಾ ಸಂಘವನ್ನು ಸಮಾಪನೆ ಮಾಡಬೇಕೆ? ಎಂಬುದರ ಬಗ್ಗೆ ವರದಿಯನ್ನು ಸಲ್ಲಿಸಿರುತ್ತಾರೆ.

ವಿಶೇಷಾಧಿಕಾರಿಯವರ ಸದರಿ ವರದಿಯಂತೆ ಈ ಸಂಘದ ಸಮಾಪನಾಧಿಕಾರಿಯಾಗಿದ್ದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರಿಂದ ಪ್ರಭಾರ ಪಡೆದು ಉಳಿದ ಪುಸ್ತಕಗಳನ್ನು ವಹಿಸಿಕೊಡುವಂತೆ ಕೋರಿದ್ದು, ಸಂಘದ ಕಾರ್ಯದರ್ಶಿಗಳು ಕೆಲವು ಪುಸ್ತಕಗಳ ಪ್ರಭಾರವನ್ನು ವಹಿಸಿಕೊಟ್ಟಿರುತ್ತಾರೆ. ಹಾಗೂ ಸಂಘದ ನೈಜ ಸದಸ್ಯರನ್ನು ಗುರುತಿಸಲು ಅನುವಾಗುವಂತೆ ಅವರು ಯಾವುದೇ ಪುಸ್ತಕಗಳನ್ನು ವಹಿಸಿಕೊಡಲು ವಿಫಲರಾದ ಕಾರಣ ಸಂಘದಲ್ಲಿರುವ 4 ಷೇರು ಲೆಡ್ಜರುಗಳನ್ನು ಪರಿಶೀಲಿಸಲಾಗಿ, ಪ್ರಥಮವಾಗಿ ಪ್ರಾರಂಭದಲ್ಲಿ ಸದಸ್ಯರಾಗಿದ್ದವರ ಹೆಸರುಗಳನ್ನು ಕೆಂಪು ಶಾಹಿಯಲ್ಲಿ ತಿದ್ದಿ ಬೇರೆಯವರ ಹೆಸರನ್ನು ಬರೆಯಲಾಗಿದೆ. ಅದರಂತೆ ಪುಟ ಸಂಖ್ಯೆ:1 ರಿಂದ 69 ರವರೆಗೆ ಮೂಲ ಸದಸ್ಯರ ಹೆಸರುಗಳನ್ನು ಶಾಹಿಯಲ್ಲಿ ಹೊಡೆದು ಹಾಕಿ ಬೇರೊಬ್ಬರ ಹೆಸರನ್ನು ಬರೆದಿರುತ್ತಾರೆ. ಅಂದರೆ, ಪ್ರಾರಂಭಿಕ ಷೇರುದಾರರನ್ನು ಯಾವುದೇ ಠರಾವುಗಳಿಲ್ಲದೆ ತೆಗೆದುಹಾಕಿರುವುದು ಕಂಡುಬರುತ್ತದೆ. ಅಂದರೆ ಸಂಘವು 1984 ರಲ್ಲಿ ಸದಸ್ಯರನ್ನಾಗಿ ಮಾಡಿಕೊಂಡವರನ್ನು ಕಿತ್ತುಹಾಕಿ 1984ರಲ್ಲಿ ಇತರರನ್ನು 69 ಜನರ ಬದಲಾಗಿ ಸೇರಿಸಿಕೊಂಡಿರುತ್ತಾರೆ. ಅಂದರೆ ಈ 69 ಜನ ಷೇರುಹಣ ಪಾವತಿಸಿ ಸದಸ್ಯರಾಗಿರುವರೇ ಇಲ್ಲವೇ ಎಂಬುದನ್ನು ಪರಿಶೀಲಿಸಲು ಸಂಘದಲ್ಲಿ ನಗದು ಪುಸ್ತಕಗಳು ಲಭ್ಯವಿರುವುದಿಲ್ಲ. ಆದ್ದರಿಂದ, ಇವರೆಲ್ಲಾ ನೈಜ ಸದಸ್ಯರೆಂದು ಹೇಳಲು ಸಾಧ್ಯವಿಲ್ಲ. ಸಂಘದಲ್ಲಿರುವ 4 ಷೇರು ಲೆಡ್ಜರ್‌ಗಳನ್ನು ಪರಿಶೀಲಿಸಿದಾಗ ಷೇರು ಲೆಡ್ಜರ್ 1, 3 ಮತ್ತು 4 ಕ್ರಮಬದ್ಧವಾಗಿ ವರ್ಷಾವಾರು ಮುಂದುವರೆದಿರುತ್ತದೆ. ಆದರೆ, ಷೇರು ಲೆಡ್ಜರ್ ಸಂಖ್ಯೆ: 2 ಕ್ರಮಬದ್ಧವಾಗಿ ಇರುವುದಿಲ್ಲ ಎಂದು ವರದಿ ಮಾಡಲಾಗಿದೆ.

ಈ ಸಂಘದ ವಿಶೇಷಾಧಿಕಾರಿಗಳು, ಈ ಸಂಘದ ನೊಂದಾಯಿತ ಕಛೇರಿ ವಿಳಾಸವನ್ನು ಪರಿಶೀಲಿಸಲಾಗಿ, ಈ ಸಂಘವು ಅನೇಕ ವರ್ಷಗಳಿಂದ ಸದರಿ ವಿಳಾಸದಲ್ಲಿ ಕಾರ್ಯನಿರ್ವಹಿಸದೆ ಇರುವುದನ್ನು ಮನಗಂಡು ಇಲಾಖೆಗೆ ವರದಿ ಮಾಡಿರುವುದು ಕಂಡುಬಂದಿರುತ್ತದೆ.

ಈ ಸಂಘವನ್ನು ದಿನಾಂಕ:06.11.2004 ರಂದು ಸಮಾಪನೆಗೊಳಿಸಿದ್ದು, ಈ ಆದೇಶವನ್ನು ಪ್ರಶ್ನಿಸಿ ಆಡಳಿತ ಮಂಡಳಿಯ ನಿರ್ದೇಶಕರುಗಳು ಮಾನ್ಯ ಸಹಕಾರ ಸಚಿವರ ಮುಂದೆ ಮೇಲ್ಮನವಿ ಸಲ್ಲಿಸಿದ್ದರು. ಅಂದರೆ ಇವರಿಗೆ ಸಂಘವು ಸಮಾಪನೆಯಾಗಿರುವ ಮಾಹಿತಿ ತಿಳಿದಿದ್ದರೂ ಸಹ ದಿನಾಂಕ:07.11.2004 ರಂದು 11 ಜನರನ್ನು ಸದಸ್ಯರನ್ನಾಗಿ ಮಾಡಿಕೊಂಡಿರುತ್ತಾರೆ. ಇದು ಕಾನೂನು ಬಾಹಿರ ನಿರ್ಣಯವಾಗಿರುತ್ತದೆ. ಆದ್ದರಿಂದ ಇವರನ್ನು ಸದಸ್ಯರಾಗಿ ಪರಿಗಣಿಸಲು ಬರುವುದಿಲ್ಲ. ಇದೇ ರೀತಿ ದಿನಾಂಕ:12.12.2004 ರಲ್ಲಿ ಮತ್ತೆ 15 ಜನರನ್ನು ಹಾಗೂ ದಿನಾಂಕ:23.01.2005ರಲ್ಲಿ 09 ಜನರನ್ನು ಸದಸ್ಯರನ್ನಾಗಿ ಮಾಡಿಕೊಂಡಿರುತ್ತಾರೆ. ತರಾತುರಿಯಾಗಿ ಹಳೆಯ ಸದಸ್ಯರನ್ನು ತೆಗೆದುಹಾಕಿ ನೂತನವಾಗಿ ಕೆಲವರನ್ನು ಸದಸ್ಯರನ್ನಾಗಿ ನೋಂದಾಯಿಸಿರುವುದು ಕಾನೂನು ಬಾಹಿರ ಕ್ರಮವಾಗಿರುತ್ತದೆ. ಆದುದರಿಂದ ಇವರನ್ನೂ ಸಹ ಸದಸ್ಯರೆಂದು ಪರಿಗಣಿಸಲು ಬರುವುದಿಲ್ಲ. ಸಂಘವು ಸಮಾಪನೆಯಾಗಿದೆ ಎಂಬ ಮಾಹಿತಿ ಗೊತ್ತಿದ್ದರೂ ಸದಸ್ಯರಿಂದ ಷೇರು ಸಂಗ್ರಹಣೆ ಮಾಡಿರುತ್ತಾರೆ ಹಾಗೂ ನಿವೇಶನ ಠೇವಣಿ ಸಂಗ್ರಹಿಸಿರುತ್ತಾರೆ. ಸಂಘದ ಹೆಸರಿನಲ್ಲಿ ಯಾವುದೇ ಜಮೀನು ಅಥವಾ ನಿವೇಶನ ಇಲ್ಲದಿದ್ದರೂ ನೂತನ ಸದಸ್ಯರಿಂದ ನಿವೇಶನ ಠೇವಣಿ ಸಂಗ್ರಹಿಸಿರುವುದು ಅನುಮಾನಾಸ್ಪದವಾಗಿದ್ದು, ಸಂಘವನ್ನು ಸಮಾಪನೆ ಮಾಡಿದ ಮೇಲೆ ಆಡಳಿತ ಮಂಡಳಿಯು ಕೈಗೊಂಡಿರುವ ಎಲ್ಲಾ ನಿರ್ಣಯಗಳು ಮತ್ತು ವಹಿವಾಟುಗಳು ಅಸಿಂಧುವಾಗುತ್ತವೆ. ಆಡಳಿತ ಮಂಡಳಿಗೆ ಅಧಿಕಾರವಿಲ್ಲದಿದ್ದರೂ ಸದಸ್ಯರನ್ನು ತೆಗೆದು ಹಾಕಿ ಅವರಿಗೆ ನಿವೇಶನ ಠೇವಣಿಯನ್ನು ವಾಪಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೆಂಗಳೂರು 1ನೇ ವಲಯ ರವರು ಸಂಘದ ಬಗ್ಗೆ ಬಂದ ದೂರು ಅರ್ಜಿಯ ಬಗ್ಗೆ ವಿಚಾರಣೆ ಮಾಡಿ ವರದಿ ನೀಡಿದ್ದು, ಸಂಘದಲ್ಲಿ ನೈಜ ಸದಸ್ಯರೇ ಇಲ್ಲವೆಂದು ವರದಿ ಮಾಡಿರುತ್ತಾರೆ. ಸಂಘದಲ್ಲಿರುವ 84 ಜನ ಸದಸ್ಯರುಗಳಿಗೆ ನೋಟೀಸು ನೀಡಿ ವಿಚಾರಣೆಗೆ ಹಾಜರಾಗಲು ತಿಳಿಸಲಾಗಿ, 60 ಜನ ಸದಸ್ಯರುಗಳ ಪತ್ರಗಳು ಸ್ವೀಕೃತಿಯಾಗದೆ ವಾಪಸ್ಸು ಬಂದಿರುವುದಾಗಿಯೂ, 11 ಜನ ಸದಸ್ಯರು ವಿಚಾರಣಾ ಸಮಯದಲ್ಲಿ ಹಾಜರಾಗಿ ತಾವು ಸಂಘದ ಸದಸ್ಯರಲ್ಲವೆಂದೂ ವಿಚಾರಣಾಧಿಕಾರಿಗಳಿಗೆ ತಿಳಿಸಿರುವುದು ಗಮನಾರ್ಹವಾಗಿರುತ್ತದೆ. 84 ಜನರ ಪೈಕಿ 71 ಜನರು ಸದಸ್ಯರಲ್ಲವೆಂದೂ, 13 ಜನರೂ ನೋಟೀಸ್ ಜಾರಿಯಾಗಿದ್ದರೂ ವಿಚಾರಣೆಗೆ ಹಾಜರಾಗಿರುವುದಿಲ್ಲವೆಂದೂ ಹಾಗೂ ದಿನಾಂಕ:25.04.2003ರ ಅಂತ್ಯಕ್ಕೆ ಆಡಳಿತ ಮಂಡಳಿಯವರು ಬಿಟ್ಟು ಉಳಿದವರು ನೈಜ ಸದಸ್ಯರಲ್ಲವೆಂದು ಕಂಡುಬಂದಿರುತ್ತದೆ.

ಸಂಘವು ಸಮಾಪನೆಯಾದ ಸಮಯದಲ್ಲಿ ಸಂಘದ ಆಡಳಿತ ಮಂಡಳಿಯಲ್ಲಿ ಶ್ರೀ ವಿ.ಸಿ. ರೆಡ್ಡಪ್ಪಚೆಟ್ಟಿ, ಶ್ರೀ ಆರ್. ಮಂಜುನಾಥ್, ಶ್ರೀ ವಿ. ಶೋಭರಾಜ್, ಶ್ರೀ ಎನ್. ಸೋಮಶೇಖರ್, ಶ್ರೀ ರವಿಕುಮಾರ್, ಶ್ರೀ ಡಿ.ನಾಗರಾಜಶೆಟ್ಟಿ, ಶ್ರೀ ಎ.ಪಳನಿಕುಮಾರ್ ಮತ್ತು ಶ್ರೀ ಜಿ. ಶ್ರೀನಿವಾಸಲು ರವರುಗಳು ಆಡಳಿತ ಮಂಡಳಿ ನಿರ್ದೇಶಕರುಗಳಾಗಿರುತ್ತಾರೆ.

ಮೇಲ್ಕಂಡ ನಿರ್ದೇಶಕರುಗಳ ಪೈಕಿ ಶ್ರೀ ವಿ. ರವಿಕುಮಾರ್, ಶ್ರೀ ಡಿ. ನಾಗರಾಜಶೆಟ್ಟಿ ಯವರ ಷೇರು ಲೆಡ್ಜರ್ ಖಾತೆಯಲ್ಲಿ ಬೇರೆಯವರ ಹೆಸರನ್ನು ಹೊಡೆದುಹಾಕಿ ಇವರ ಹೆಸರನ್ನು ಸೇರಿಸಲಾಗಿದೆ. ಇವರು ನೈಜ ಸದಸ್ಯರೆ ಎಂಬುದಕ್ಕೆ

ದಾಖಲೆಗಳಿರುವುದಿಲ್ಲ. ಇದೇ ರೀತಿ ಶ್ರೀ ಪಳನಿಕುಮಾರ್ ಮತ್ತು ಶ್ರೀ ಶ್ರೀನಿವಾಸಲು ನೈಜ ಸದಸ್ಯರಲ್ಲವೆಂದು ಅಭಿಪ್ರಾಯಪಡಲಾಗಿದೆ. ದಿನಾಂಕ:15.06.2001ರ ಸಂಘದ ತಿದ್ದುಪಡಿಯಾದ ಉಪನಿಯಮದಂತೆ ಒಂದು ಷೇರಿನ ಬೆಲೆ ರೂ.1,000/–ಕ್ಕೆ ಹೆಚ್ಚಿಸಿಕೊಂಡಿರುತ್ತಾರೆ. ಆದರೆ ಈ ಮೇಲ್ಕಂಡ 04 ಜನರು ಕ್ರಮವಾಗಿ ರೂ.2/–, ರೂ.10/– ಮತ್ತು ರೂ.2/– ಗಳ ಷೇರು ಫೀ ಪಾವತಿಸಿ ರೂ.1,000/– ಬೆಲೆಯ ಷೇರನ್ನು ಪಡೆದಿರುವುದು ಅಕ್ರಮವಾಗಿದ್ದು, ಇವರು ಆ ದಿನ ಸಂಘದ ಸದಸ್ಯರಲ್ಲವೆಂಬುದು ದೃಢಪಡುತ್ತದೆ.

ಸಂಘದಲ್ಲಿ ಕೇವಲ ನಾಲ್ವರು ನೈಜ ಸದಸ್ಯರು ಮಾತ್ರ ಇರುವುದು ಮೇಲ್ಕಂಡ ಅಂಶಗಳಿಂದ ದೃಢಪಡುತ್ತದೆ. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 6(2)(ಬಿ) ಪ್ರಕಾರ ಸಂಘವನ್ನು ನೋಂದಣಿ ಮಾಡಲು 10 ಸದಸ್ಯರು ಬೇಕಾಗಿರುತ್ತದೆ. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಎ) ರನ್ವಯ ಮೇಲ್ಕಂಡಂತೆ 10 ಸದಸ್ಯರಿಗಿಂತ ಕಡಿಮೆ ಇದ್ದಲ್ಲಿ ಅಂತಹ ಸಹಕಾರ ಸಂಘವನ್ನು ಸಮಾಪನೆ ಮಾಡಬೇಕಾಗಿರುತ್ತದೆ.

ಮೇಲ್ಕಂಡ ಅಂಶಗಳನ್ನು ಗಮನಿಸಿದಾಗ ಸಂಘವನ್ನು ಮುಂದುವರೆಸುವುದು ಸಮಂಜಸವಲ್ಲವೆಂಬ ಅಭಿಪ್ರಾಯದೊಂದಿಗೆ, ಹಾಲಿ ಆಡಳಿತ ಮಂಡಳಿ ಅಸ್ಥಿತ್ವದಲ್ಲಿ ಇಲ್ಲದೇ ಇರುವುದರಿಂದ ಹಾಗೂ ಅವರ ಅವಧಿಯು ದಿನಾಂಕ:31.03.2005ಕ್ಕೆ ಮುಕ್ತಾಯವಾಗಿರುವುದರಿಂದ ಹಿಂದಿನ ಆಡಳಿತ ಮಂಡಳಿ ಸದಸ್ಯರಿಗೆ ಕಾರಣ ಕೇಳಿ ನೋಟೀಸ್ ನೀಡುವ ಅವಶ್ಯಕತೆ ಇಲ್ಲದಿರುವುದರಿಂದ ಈ ಸಂಘವನ್ನು ನೇರವಾಗಿ ಸಮಾಪನೆ ಮಾಡುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ 2001, ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಸಿ.ಎಸ್. ವೀರೇಶ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಅಗರಬತ್ತಿ ವರ್ಕರ್ಸ್ ಅಂಡ್ ಅದರ್ಸ್ ಹೌಸ್ ಬಿಲ್ಡಿಂಗ್ ಕೋ–ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(ಬಿ) ರನ್ವಯ ಸಮಾಪನೆಗೊಳಿಸಿ ಶ್ರೀ ಹೆಚ್.ಎಸ್. ಸೋಮಶೇಖರ್, ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು, ಇವರನ್ನು ಸಮಾಪನಾಧಿಕಾರಿಯಾಗಿ ನೇಮಿಸಿ ಆದೇಶಿಸಲಾಗಿದೆ.

ಸಮಾಪನಾಧಿಕಾರಿಯು ಸಂಘದ ಪ್ರಭಾರವನ್ನು ಕೂಡಲೇ ಪಡೆದು ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಛೇರಿಗೆ ಸಲ್ಲಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 74 ಮತ್ತು ನಿಯಮ 33ರಂತೆ ಸಮಾಪನಾಧಿಕಾರಿಯ ಕರ್ತವ್ಯ ನಿರ್ವಹಿಸುವುದಲ್ಲದೆ ಸಂಘದ ಇತ್ತೀಚಿನ ಲೆಕ್ಕ ತಪಾಸಣಾ ವರದಿಯನ್ನು ಆಧರಿಸಿ ಆದ್ಯತಾ ಪಟ್ಟಿಯನ್ನು ತಯಾರಿಸಿ, ಈ ಕಛೇರಿಯ ಅನುಮೋದನೆ ಪಡೆದು ಆಸ್ತಿ–ಜವಾಬ್ದಾರಿಗಳನ್ನು ತ್ವರಿತವಾಗಿ ವಿಲೇವಾರಿ ಮಾಡಿ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ:28.02.2009 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್.277

**ಸದಾಶಿವನಗರ ಪೊಲೀಸ್ ಠಾಣೆಯಲ್ಲಿ ಅಮಾನತ್ತುಪಡಿಸಿರುವ ಮಾಲುಗಳ ವಿವರ**

**1981**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 247/81 | 95/81 | ಒಂದು ಬ್ರೋಕನ್ ಚೈನ್ ಮತ್ತು ಡಾಲರ್ |

**1986**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 216/86 | 99/86 | ಒಂದು ಎಲೆಕ್ಟ್ರಿಕಲ್ ಕ್ಯಾಸೆಟ್ ರೆಕಾರ್ಡರ್ |

**1987**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 146/87 | 30/87 | ಒಂದು ಜೊತೆ ಕೆಂಪು ಕಲ್ಲಿನ ಹಿತ್ತಾಳೆಯ ಓಲೆ ಒಂದಕ್ಕೆ ತಿರುಪ ಇರುವುದಿಲ್ಲ. |
| 2. | 146/87 | 94/87 | ಒಂದು ಜೊತೆ ಬಿಳಿ ಕಲ್ಲಿನ ಓಲೆ ತೂಕ ಸುಮಾರು 5 ಗ್ರಾಂ 350 ಮಿಲಿ ಹಾಗೂ ಮೂಗುತಿ 200 ಮಿಲಿ |
| 3. | 159/87 | 94/87 | ಒಂದು ಕೆಂಪು ಕಲ್ಲಿನ ಓಲೆ ತೂಕ 4 ಗ್ರಾಂ ತೂಕ 5 ಮಿಲಿ |

**2005**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 88/05 | 48/05 | ಒಂದು ಹಿರೋ ಹೊಂಡಾ ಸ್ಪ್ಲೆಂಡರ್ ನಂ.ಎಪಿ–16–ಆರ್–3682 |
| 2. | 102/05 | 59/05 | ಒಂದು ಪಲ್ಸರ್ ಮೋಟಾರ್ ಸೈಕಲ್ ನಂ.ಕೆಎ–40 ಹೆಚ್–5295 |
| 3. | 35/05 | 30/07 | ಒಂದು ಹಿರೋ ಹೊಂಡಾ ಸ್ಪ್ಲೆಂಡರ್ ನಂ.ಕೆಎ–14–ಕೆ–3033, ನಂಬರ್ ಬದಲಾಗಿದೆ. |

**1986**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 149/86 | 46/86 | ಒಂದು ಜೊತೆ ಬೆಳ್ಳಿಯಂತೆ ಇರುವ ಓಲೆಗಳು |
| 2. | 178/86 | 101/86 | ಒಂದು ಸೀಕೋ ಕೈ ಗಡಿಯಾರ ಸುಸ್ಥಿತಿಯಲ್ಲಿಲ್ಲ |

**1989**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 109/89 | 36/89 | 1. ಒಂದು ಬೆಳ್ಳಿಯ ಸೊಂಟದ ಉಡುದಾರ ತೂಕ ಸುಮಾರು 13 ಗ್ರಾಂ.<br>2. ಒಂದು ಬೆಳ್ಳಿಯ ಉಡುದಾರ ತೂಕ 21 ಗ್ರಾಂ.<br>3. ಒಂದು ಬೆಳ್ಳಿಯ ಗೆಜ್ಜೆಯ ಉಡುದಾರ ತೂಕ ಸುಮಾರು 21 ಗ್ರಾಂ.<br>4. ಒಂದು ಜೊತೆ ಬೆಳ್ಳಿಯ ಕಾಲು ಚೈನ್ ತೂಕ ಸುಮಾರು 20 ಗ್ರಾಂ.<br>5. ಒಂದು ಜೊತೆ ಮಾವಿನಕಾಯಿ ಡಿಸೈನಿನ ಬೆಳ್ಳಿಯ ಕಾಲು ಚೈನ್. |
| 2. | 91/89 | 37/89 | 1. ಒಂದು ಜೊತೆ ಮಾವಿನ ಕಾಯಿ ಡಿಸೈನಿನ ಮಕ್ಕಳ ಕಾಲು ಚೈನು ತೂಕ ಸುಮಾರು 14 ಗ್ರಾಂ.<br>2. ಒಂದು ಬೆಳ್ಳಿಯ ಉಡುದಾರ ತೂಕ ಸುಮಾರು 16 ಗ್ರಾಂ. |
| 3. | 91/89 | 38/89 | 1. ಒಂದು ಜೊತೆ ಎಸ್. ಡಿಸೈನಿನ ಬೆಳ್ಳಿಯ ಕಾಲು ಚೈನು ತೂಕ ಸುಮಾರು 20 ಗ್ರಾಂ.<br>2. ಒಂದು ಜೊತೆ ಬೆಳ್ಳಿಯ ಕಂಬಿಯ ಸ್ಟಾರ್ ತೂಕ ಸುಮಾರು 200 ಮಿಲಿ ಗ್ರಾಂ. |
| 4. | 97/89 | 39/89 | ಮಕ್ಕಳ ಒಂದು ಚಿಕ್ಕ ಚಿನ್ನದ ಉಂಗುರ ತೂಕ ಸುಮಾರು 700 ಮಿಲಿ ಗ್ರಾಂ. |
| 5. | 91/89 | 40/89 | 1. ಒಂದು ಜೊತೆ ಬೆಳ್ಳಿಯ ಉಡುದಾರ ತೂಕ ಸುಮಾರು 7.5 ಗ್ರಾಂ.<br>2. ಒಂದು ಜೊತೆ ಗೆಜ್ಜೆಯ ಬೆಳ್ಳಿಯ ಕಾಲು ಚೈನ್ ತೂಕ ಸುಮಾರು 27.5 ಗ್ರಾಂ. |
| 6. | 168/89 | 49/89 | ಒಂದು ನ್ಯಾಷನಲ್ ಪ್ಯಾನಸೋನಿಕ್ 2 ಇನ್ 1 ಮಾಡಲ್ ನಂ.ಎಸ್.ಕ್ಯೂ.ಜೆ.ಇ.ಆರ್–40231 ಸುಸ್ಥಿತಿಯಲ್ಲಿಲ್ಲ. |
| 7. | 168/89 | 50/89 | ಒಂದು ಯಾಶಿಕ್ ಕ್ಯಾಮರ |
| 8. | 208/89 | 59/89 | 1. ಒಂದು ಹೆಚ್.ಎಂ.ಟಿ. ಕಾರ್ತಿಕ್ ಕೈ ಗಡಿಯಾರ ಸುಸ್ಥಿತಿಯಲ್ಲಿಲ್ಲ.<br>2. ಒಂದು ಫೋನ್ ಡಿಸೈನ್ ಓಲೆ. 1.6 ಗ್ರಾಂ. |
| 9. | 208/89 | 62/89 | 1. ಒಂದು ಹೆಚ್.ಎಂ.ಟಿ. ಕೈ ಗಡಿಯಾರ ಸುಸ್ಥಿತಿಯಲ್ಲಿಲ್ಲ.<br>2. ಒಂದು ಸಿಟಿಜನ್ ಕೈ ಗಡಿಯಾರ ಸುಸ್ಥಿತಿಯಲ್ಲಿಲ್ಲ.<br>3. ಹೆಚ್.ಎಂ.ಟಿ. ವಿಜಯ್ ಕೈ ಗಡಿಯಾರ ಸುಸ್ಥಿತಿಯಲ್ಲಿಲ್ಲ.<br>4. ಒಂದು ಹೇಮಾ ಕಪ್ಪು ಬೆಲ್ಟ್ ಇರುವ ಕೈ ಗಡಿಯಾರ ಸುಸ್ಥಿತಿಯಲ್ಲಿಲ್ಲ.<br>5. ಒಂದು ಅಜಯ್ ಕೈ ಗಡಿಯಾರ ಸುಸ್ಥಿತಿಯಲ್ಲಿಲ್ಲ.<br>6. ಒಂದು ಕೈ ಗಡಿಯಾರ ಸುಸ್ಥಿತಿಯಲ್ಲಿಲ್ಲ.<br>7. ಒಂದು ಟೇಪ್ ರೆಕಾರ್ಡರ್ ಸುಸ್ಥಿತಿಯಲ್ಲಿಲ್ಲ. |

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 10. | 208/89 | 68/89 | ಒಂದು ಜೊತೆ ಬೆಳ್ಳಿಯ ಕಾಲು ಚೈನ್ |
| 11. | 208/89 | 58/89 | 1. ಒಂದು ಹೆಚ್.ಎಂ.ಟಿ.ಯ ಹಳೆಯ ಕೈ ಗಡಿಯಾರ ಸುಸ್ಥಿತಿಯಲ್ಲಿಲ್ಲ.<br>2. ಒಂದು ಪವರ್ ಲೂಬಾ ಕೈ ಗಡಿಯಾರ ಸುಸ್ಥಿತಿಯಲ್ಲಿಲ್ಲ.<br>3. ಒಂದು ಸಿಟಿಜನ್ ಲೇಡಿಸ್ ಪಾಚಿ ಕಲರ್‌ನ ಕೈ ಗಡಿಯಾರ ಸುಸ್ಥಿತಿಯಲ್ಲಿಲ್ಲ. |

**1990**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 95/90 | 13/90 | ಒಂದು ರೀಕೋ ಕೈ ಗಡಿಯಾರ ಸುಸ್ಥಿತಿಯಲ್ಲಿಲ್ಲ |
| 2. | 209/90 | 04/90 | ಒಂದು ನ್ಯಾಷನಲ್ ಪೆನಾಸೋನಿಕ್ ಕಾರಿನ ಸ್ಟೀರಿಯೋ ಸುಸ್ಥಿತಿಯಲ್ಲಿಲ್ಲ |
| 3. | 209/90 | 06/90 | ಒಂದು ನ್ಯಾಷನಲ್ ಪೆನಾಸೋನಿಕ್ ಕಾರಿನ ಸ್ಟೀರಿಯೋ ಸುಸ್ಥಿತಿಯಲ್ಲಿಲ್ಲ |
| 4. | 209/90 | 07/90 | ಎರಡು ಕ್ಲಾರಿಯನ್ ಸ್ಪೀಕರ್‌ಗಳು |

**1991**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 85/91 | 13/91 | ಒಂದು ಫಿಲಿಪ್ಸ್ ಟ್ರಾನ್ಸಿಸ್ಟರ್ ರೇಡಿಯೋ ಸುಸ್ಥಿತಿಯಲ್ಲಿಲ್ಲ |
| 2. | 87/91 | 15/91 | 1. ಒಂದು ಕ್ಲಾರಿನೋ ಸ್ಪೀಕರ್ |
| 3. | 120/91 | 20/91 | ಒಂದು ಹೆಚ್.ಎಂ.ಟಿ. ಸ್ಟೀಲ್ ಕೇಸಿನ ಕೈ ಗಡಿಯಾರ ಸುಸ್ಥಿತಿಯಲ್ಲಿಲ್ಲ |
| 4. | 155/91 | 45/91 | 5 ಕೆ.ಜಿ. ತಾಮ್ರದ ಗಟ್ಟಿ |
| 5. | 220/91 | 67/91 | ಒಂದು ಗುಂಡಿನ ಮಾದರಿಯ ಡಿಸೈನಿನ ಸುಮಾರು 22 ಗ್ರಾಂ ತೂಕದ ಚಿನ್ನದ ಚೈನ್ |

**1992**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 123/92 | 32/92 | 1. ಒಂದು ಪ್ಲಾಸ್ಟಿಕ್ ಕೈ ಗಡಿಯಾರ ಸುಸ್ಥಿತಿಯಲ್ಲಿಲ್ಲ.<br>2. ಒಂದು ಸೀಕೋ ಕ್ವಾರ್ಟ್ಜ್ ಕೈ ಗಡಿಯಾರ ಸುಸ್ಥಿತಿಯಲ್ಲಿಲ್ಲ |
| 2. | 123/92 | 33/92 | ಒಂದು ಆಲ್ವೀನ್ ಕೈ ಗಡಿಯಾರ ಸುಸ್ಥಿತಿಯಲ್ಲಿಲ್ಲ |
| 3. | 123/92 | 73/92 | ಒಂದು ಕಂಪ್ರೆಸರ್ |
| 4. | 215/92 | 66/92 | ಒಂದು ಹಸಿರು ಬಣ್ಣದ ಎ.ಕೆ.ಆರ್. ಎಂಬ ಹೆಸರಿನ ಸಾದಾ ಉಂಗುರ ತೂಕ ಸುಮಾರು 4.19 ಗ್ರಾಂ ಇರುತ್ತದೆ. |

**1993**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 24/93 | 06/93 | 4 ಅಡಿ ಎತ್ತರ 2.5 ಅಡಿ ಅಗಲದ ಕಬ್ಬಿಣದ ಅಲೆಮಾರ |
| 2. | 26/93 | 07/93 | ಒಂದು ಜೊತೆ ಚಿನ್ನದ ಓಲೆ ತೂಕ ಸುಮಾರು 3.5 ಗ್ರಾಂ ಇರುತ್ತದೆ. |
| 3. | 107/93 | 48/93 | 1. ಒಂದು ಶಾರ್ಪ್ ಕ್ಯಾಲ್ಕುಲೇಟರ್<br>2. ಒಂದು ಹೆಂಗಸರ ಕೈ ಗಡಿಯಾರ ಸುಸ್ಥಿತಿಯಲ್ಲಿಲ್ಲ |
| 4. | 249/93 | 109/93 | ಒಂದು ಸ್ಟೀಲ್ ಕೇಸಿನ ಕೈ ಗಡಿಯಾರ ಸುಸ್ಥಿತಿಯಲ್ಲಿಲ್ಲ |
| 5. | 265/93 | 133/93 | ಒಂದು ಡೆಕ್ ಸುಸ್ಥಿತಿಯಲ್ಲಿಲ್ಲ |
| 6. | 285/93 | 134/93 | ಒಂದು 2 ಇನ್ 1 ಟೇಪ್ ರಿಕಾರ್ಡರ್ ಸುಸ್ಥಿತಿಯಲ್ಲಿಲ್ಲ |
| 7. | 285/93 | 136/93 | 1. ಒಂದು ಜೊತೆ ಹಿತ್ತಾಳೆ ಕಂಬಗಳು<br>2. ಒಂದು ಮುಚ್ಚಳ ಇರುವ ಹಿತ್ತಾಳೆ ಬಕೆಟ್<br>3. ಒಂದು ಟಿಫಿನ್ ಕ್ಯಾರಿಯರ್ |
| 8. | 285/93 | 137/93 | 1. ಒಂದು ಚಿನ್ನದ ಚಿಕ್ಕ ಸ್ಟಾರ್<br>2. ಒಂದು ಚಿನ್ನದ ಚಿಕ್ಕ ಉಂಗುರ (ಎರಡು ಸೇರಿ 700 ಮಿ.ಗ್ರಾಂ. ಇರುತ್ತದೆ) |
| 9. | 297/93 | 147/93 | ಒಂದು ಚಿನ್ನದ ಚೈನು ತೂಕ 9.4 ಗ್ರಾಂ. |

**1994**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 255/94 | 07/94 | ಒಂದು ವಾಕ್ ಮನ್ ಸುಸ್ಥಿತಿಯಲ್ಲಿಲ್ಲ |
| 2. | 134/94 | 09/94 | ಒಂದು ಕ್ಯಾಲ್ಕುಲೇಟರ್ |
| 3. | 149/94 | 11/94 | 1. ಒಂದು ನೋಟು ಕೆನಡಾ ಡಾಲರ್<br>2. ಒಂದು ಇಂಗ್ಲೆಂಡ್ ದೇಶದ 5 ಪೌಂಡ್ ನೋಟು<br>3. ಒಂದು ಯು.ಎಸ್.ಎ. ಡಾಲರ್ ನೋಟು<br>4. ಒಂದು ಸೌದಿ ಅರೇಬಿಯಾ ರಿಯಾನ್ ನೋಟು<br>5. ಒಂದು ಲಿಬರ್ಟಿಸ್ ಎಂದು ಇರುವ ಕ್ವಾರ್ಟರ್ ಡಾಲರ್ ನ 10 ನಾಣ್ಯಗಳು<br>6. 5 ಸೆಂಟ್ ನ ಒಂದು ನಾಣ್ಯ.<br>7. 13 ಡಿ.ಐ.ಎಂ.ಇ. ನಾಣ್ಯಗಳು.<br>8. ಒಂದು ಕೆನರಾ ಬ್ಯಾಂಕ್‌ನ ಪಾಸ್ ಪುಸ್ತಕ ನಂ.12064<br>9. ಒಂದು ಚೆಕ್ ಪುಸ್ತಕ |
| 4. | 238/94 | 49/94 | 1. ಒಂದು ಕಪ್ಪು ಬಣ್ಣದ ಫಿಲಿಪ್ಸ್ ಟೇಪ್ ರಿಕಾರ್ಡರ್ ಸುಸ್ಥಿತಿಯಲ್ಲಿಲ್ಲ |

**1995**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 291/95 | 61/95 | ಒಂದು ಬೆಳ್ಳಿಯ ತಟ್ಟೆ ತೂಕ ಸುಮಾರು 350 ಗ್ರಾಂ. |

**1996**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 07/96 | 79/96 | ಒಂದು ಕಪ್ಪು ಬಣ್ಣದ ಒಲಂಪಸ್ ಕ್ಯಾಮರ |

**1997**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 185/97 | 35/97 | 100 ರೂಪಾಯಿನ 29 ನೋಟುಗಳು, ಒಟ್ಟು 2900/- ರೂ.ಗಳು |
| 2. | 152/97 | 38/97 | ಒಂದು ಯಮಹಾ ಮೋಟರ್ ಸೈಕಲ್ ನಂ.ಕೆಎ-20 ಜೆ-9062 ಇದರಲ್ಲಿ ಕಾರ್ಬೋರೇಟರ್ ಇರುವುದಿಲ್ಲ. ಇಂಜಿನ್ ಕವರ್ ಹಾಗೂ ಮೋಟಾರ್ ಸೆಟ್ ಬಿಡಿ ಭಾಗಗಳು ಇರುವುದಿಲ್ಲ. |
| 3. | 203/97 | 60/97 | ಒಂದು ಲೂನಾ ಪ್ಲಸ್ ನಂ.ಸಿ.ಕೆ.ಎಲ್.6263 ಸುಸ್ಥಿತಿಯಲ್ಲಿಲ್ಲ |
| 4. | 317/97 | 69/97 | ಒಂದು ಶಿವಾಸ್ ಗೋಲ್ಡ್ ಕೇಸ್ ಕೈಗಡಿಯಾರ ಸುಸ್ಥಿತಿಯಲ್ಲಿಲ್ಲ |

**1998**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 156/98 | 33/98 | ಎರಡು ಚಿನ್ನದ ಗಟ್ಟಿಗಳು ತೂಕ ಸುಮಾರು 14.950 ಮಿಲಿ ಗ್ರಾಂ. |
| 2. | 105/98 | 62/98 | ಒಂದು ಬಜಾಜ್ ಚೇತಕ್ ಸ್ಕೂಟರ್ ನಂ.ಕೆಎ-03/ಆರ್-8846 ಸುಸ್ಥಿತಿಯಲ್ಲಿಲ್ಲ |

**1999**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 98/99 | 07/99 | ಒಂದು ಗ್ಯಾಸ್ ಸಿಲಿಂಡರ್ |

**2000**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 264/00 | 02/00 | ಒಂದು ಕೈನೆಟಿಕ್ ಪ್ರೈಡ್ ಮೊಪೆಡ್ ನಂಬರ್ ಇರುವುದಿಲ್ಲ ಸುಸ್ಥಿತಿಯಲ್ಲಿರುವುದಿಲ್ಲ. |
| 2. | 34/00 | 06/00 | 50 ರೂ.ನ ಎರಡು ನೋಟುಗಳು ಮತ್ತು 10 ರೂ.ನ ಎರಡು ನೋಟುಗಳು ಒಟ್ಟು 120/– ರೂ.ಗಳು |

**2001**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 253/01 | 62/01 | 1. ಒಂದು ಕಪ್ಪು ಬಣ್ಣದ ಪರ್ಸ್<br>2. 100 ರೂ.ನ 5 ನೋಟುಗಳು.<br>3. ಒಂದು ಲಾಯರ್ ಲಾ ಅಸೋಸಿಯೇಷನ್ ಮೆಂಬರ್‌ಷಿಪ್ ಕಾರ್ಡ್ |

**2002**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 177/02 | 32/02 | 1. ಒಂದು ಹಳದಿ ಬಣ್ಣದ ಪರ್ಸ್<br>2. 50 ರೂ.ಗಳ 5 ನೋಟುಗಳು ಒಟ್ಟು 250/– ರೂ.ಗಳು |

**2003**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 72/03 | 39/03 | ಒಂದು ಚಿನ್ನದ ಬಟಾಣಿ ಡಿಸೈನಿನ ಚೈನ್ 12.200 ಗ್ರಾಂ ಇರುತ್ತದೆ. |
| 2. | 117/03 | 49/03 | 1. ಒಂದು ಚಿನ್ನದ ಚೈನು ತೂಕ ಸುಮಾರು 11.22 ಗ್ರಾಂ ಇರುತ್ತದೆ.<br>2. ಎರಡು ಜೊತೆ ಕಿವಿಯ ಓಲೆಗಳು ಹಾಗೂ ಒಂದು ಕಿವಿಯ ಚೈನು ತೂಕ ಸುಮಾರು 8 ಗ್ರಾಂ ಇರುತ್ತದೆ.<br>3. ಒಂದು ಕೈ ಬೆರಳಿನ ಚಿಕ್ಕ ಉಂಗುರ ತೂಕ ಸುಮಾರು 1.5 ಗ್ರಾಂ. |
| 3. | 203/03 | 68/03 | 1. ಬಿ.ಎಂ.ಟಿ.ಸಿ. 2 ಬಸ್ ಟಿಕೆಟ್<br>2. 100/– ರೂ.ನ ಒಂದು ನೋಟು |
| 4. | 17/03 | 77/03 | ಒಂದು ಕಾರ್ ಸ್ಟೀರಿಯೋ ಸುಸ್ಥಿತಿಯಲ್ಲಿಲ್ಲ |

**2005**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 370/05 | 63/05 | ಕೈನೆಟಿಕ್ ಹೊಂಡಾ ನಂ.ಕೆಎ–02/ಯು–8674 |
| 2. | 372/05 | 64/05 | ಬಜಾಜ್ ಚೇತಕ್ ನಂ.ಸಿಕೆಎಂ–7936 |

**2006**

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 26/06 | 82/06 | ಸಿಬಿಜೆಡ್ ಮೋಟಾರ್ ವಾಹನ ನಂ.ಕೆಎ–04/ಇಎ–6973 |

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 1. | 209/90 | 01/04 | ಒಂದು ಕಾರು ಸ್ಟೀರಿಯೋ ಸುಸ್ಥಿತಿಯಲ್ಲಿಲ್ಲ |
| 2. | 259/99 | 62/99 | ಒಂದು ಗೋದ್ರೇಜ್ ಬೀಗ |

| ಕ್ರಮ ಸಂಖ್ಯೆ | ಅಪರಾಧ ಸಂಖ್ಯೆ | ಪಿ.ಎಫ್. ಸಂಖ್ಯೆ | ಮಾಲು |
|---|---|---|---|
| 3. | 17/03 | 77/03 | ಒಂದು ಕಾರ್‌ಸ್ಟೀರಿಯೋ ಸುಸ್ಥಿತಿಯಲ್ಲಿಲ್ಲ |
| 4. | 182/94 | 49/94 | ಒಂದು ಕಾರ್ ಸ್ಟೀರಿಯೋ ಸುಸ್ಥಿತಿಯಲ್ಲಿಲ್ಲ |
| 5. | 209/90 | 05/90 | ಒಂದು ಕಾರ್ ಸ್ಟೀರಿಯೋ ಸುಸ್ಥಿತಿಯಲ್ಲಿಲ್ಲ |
| 6. | 134/93 | 09/94 | ಒಂದು ಟೇಪ್ ರೆಕಾರ್ಡರ್ ಸುಸ್ಥಿತಿಯಲ್ಲಿಲ್ಲ |

VII, Addl. Chief
Metropolitan Magistrate, Bangalore City.

ಪಿ.ಆರ್.640

**ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:105/07–08**

**ಉಪಸ್ಥಿತರು:** ಡಾ।। ವೈ. ಮಂಜುನಾಥ್,
ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಫಿರ್ಯಾದುದಾರರು**

ಎ.ಸಿ. ಲತಾ,
ಅಬಕಾರಿ ಉಪ ನಿರೀಕ್ಷಕರು–2
(ಜಾರಿ ಮತ್ತು ತನಿಖೆ), ಮೈಸೂರು ಉತ್ತರ ವಲಯ.

**ಪ್ರತಿವಾದಿ**

1) ನಾರಾಯಣ ಬಿನ್ ತಿಮ್ಮಯ್ಯ
ಸಂ. 993, ಸಾತಗಳ್ಳಿ ಲೇ–ಔಟ್, ಮೈಸೂರು.
2) ಬಿ.ಸಿ. ಸ್ವಾಮಿ ಬಿನ್ ಚಿನ್ನಸ್ವಾಮಿಗೌಡ,
ಸಂ.586, ಬೋಳನಹಳ್ಳಿ, ಬಿಳಿಕೆರೆ ಹೋಬಳಿ,
ಹುಣಸೂರು ತಾಲ್ಲೂಕು.

**ಪ್ರಕರಣದ ಮುಖ್ಯಾಂಶಗಳು :**

ದಿನಾಂಕ : 13-08-07ರಂದು ಸಂಜೆ 5-00 ಗಂಟೆಯ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು–2, (ಜಾರಿ ಮತ್ತು ತನಿಖೆ), ಮೈಸೂರು ಉತ್ತರ ವಲಯ ಇವರು ಮೈಸೂರು ತಾಲ್ಲೂಕು, ಸಾತಗಳ್ಳಿ ಲೇಔಟ್, ಮನೆ ನಂ. 993 ರಲ್ಲಿ ಅಕ್ರಮವಾಗಿ ನಕಲಿ ಮದ್ಯ, ಬ್ಲೆಂಡ್ ಮದ್ಯ, ಮದ್ಯಸಾರ ಇತರೆ ಮದ್ಯಗಳನ್ನು ಹೊಂದಿದ್ದ ಅಪರಾಧಕ್ಕಾಗಿ ಮತ್ತು TN–38/Y-2500 ನೋಂದಣಿ ಸಂಖ್ಯೆಯ ಸಿಯೆಲ್ಲೋ ಕಾರ್ ವಾಹನವನ್ನು ಮದ್ಯ ಸರಬರಾಜು ಮಾಡಲು ಉಪಯೋಗಿಸುತ್ತಿದ್ದುದ್ದಕ್ಕಾಗಿ ವಾಹನ ಮತ್ತು ಅಬಕಾರಿ ವಸ್ತುಗಳನ್ನು ವಶಪಡಿಸಿಕೊಂಡು, ಪ್ರ.ಮಾ.ವ ಸಂಖ್ಯೆ 02/07-08ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 13ರ ಪ್ರಕಾರ ಅಪರಾಧವಾಗಿದ್ದು, ಕಲಂ 32, 38(A) ಪ್ರಕಾರ ಶಿಕ್ಷಾರ್ಹವಾದ್ದರಿಂದ 1 ಮತ್ತು 2ನೇ ಆರೋಪಿಯನ್ನು ದಸ್ತಗಿರಿಮಾಡಿ, ನ್ಯಾಯಾಲಯದ ಮುಂದೆ ಹಾಜರುಪಡಿಸಿರುವುದಾಗಿ ಮೊಕದ್ದಮೆಯನ್ನು ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಕರಣದ ಆರೋಪಿಗಳಾದ ನಾರಾಯಣ ಬಿನ್ ತಿಮ್ಮಯ್ಯ ಮತ್ತು ಬಿ.ಸಿ. ಸ್ವಾಮಿ ಬಿನ್ ಚಿನ್ನಸ್ವಾಮಿಗೌಡ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ:18-09-07ರಂದು ಕಾರಣ ಕೇಳುವ ನೋಟೀಸನ್ನು ನೋಂದಣಿ ಅಂಚೆ ಮೂಲಕ ಜಾರಿಗೊಳಿಸಲಾಗಿದ್ದು, ಸದರಿ ನೋಟೀಸ್ ಜಾರಿಯಾಗಿ, ಸ್ವೀಕೃತಿಯು ಈ ಪ್ರಾಧಿಕಾರಕ್ಕೆ ಕ್ರಮವಾಗಿ ದಿನಾಂಕ: 03-10-07 ಮತ್ತು 25-10-07ರಂದು ಸ್ವೀಕೃತವಾಗಿರುತ್ತದೆ. ಹಾಗೆಯೇ ವಾಹನದ ಮಾಲೀಕತ್ವದ ವಿವರವನ್ನು ಕೋರಿ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕೊಯಮತ್ತೂರು ಜಿಲ್ಲೆ, ತಮಿಳುನಾಡು ರಾಜ್ಯ ಇವರಿಗೆ ದಿನಾಂಕ : 29-08-07 ರಂದು ಪತ್ರ ವ್ಯವಹಾರ ನಡೆಸಲಾಗಿದ್ದು, ಇದಕ್ಕೆ ಯಾವುದೇ ಪ್ರತಿಕ್ರಿಯೆ ಇಲ್ಲದ ಕಾರಣ ದಿನಾಂಕ: 17-10-07 ಮತ್ತು 17-11-07 ರಂದು ಚೆನ್ನೈನ ಟ್ರಾನ್ಸ್‌ಪೋರ್ಟ್ ಆಯುಕ್ತರಿಗೆ ಪತ್ರ ವ್ಯವಹಾರ ನಡೆಸಿ, ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ''ಬಿ'' ವಹಿಯನ್ನು ನೀಡುವಂತೆ ನಿರ್ದೇಶನವನ್ನು ನೀಡಲು ಕೋರಿ ಪತ್ರ ಬರೆಯಲಾಗಿರುತ್ತದೆ. ಈ ಪ್ರಕರಣದಲ್ಲಿ ಜಪ್ತುಗೊಳಿಸಲಾದ 60.480 ಲೀ. ಮದ್ಯ, 5 ಲೀ. ಮದ್ಯಸಾರ, 135 ಲೀ. ಬ್ಲೆಂಡ್ ಮದ್ಯ, ಮುಚ್ಚಳಗಳು, ಅಡ್ಹೆಸಿವ್ ಲೇಬಲ್‌ಗಳು, ಖಾಲಿ ಸೀಸೆಗಳು ಮತ್ತು ಇತರೆ ವಸ್ತುಗಳನ್ನು ದಿನಾಂಕ : 21-11-07 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ಹೊರಡಿಸಲಾಗಿರುತ್ತದೆ. ಮೈಸೂರು ಉತ್ತರ ತಾಲ್ಲೂಕಿನ ಜಾರಿ ಮತ್ತು ತನಿಖೆಯ ಅಬಕಾರಿ ಉಪ ನಿರೀಕ್ಷಕರು–2 ತಮ್ಮ ಪತ್ರ ದಿನಾಂಕ : 06-12-07ರಲ್ಲಿ ಜಪ್ತುಗೊಳಿಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವರದಿ ಮಾಡಿರುತ್ತಾರೆ.

ಈ ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ದಿನಾಂಕ:13-08-07ರಂದು ಮೈಸೂರು ತಾಲ್ಲೂಕು, ಸಾತಗಳ್ಳಿ ಲೇಔಟ್, ಮನೆ ನಂ. 993 ರಲ್ಲಿ ಅಕ್ರಮವಾಗಿ ನಕಲಿ ಮದ್ಯ, ಬ್ಲೆಂಡ್ ಮದ್ಯ, ಮದ್ಯಸಾರ ಮತ್ತು ಇತರೆ ಮದ್ಯಗಳನ್ನು ಹೊಂದಿದ್ದ ಅಪರಾಧಕ್ಕಾಗಿ ಮತ್ತು TN–38/Y-2500 ನೋಂದಣಿ ಸಂಖ್ಯೆಯ ಸಿಯೆಲ್ಲೋ ಕಾರ್ ವಾಹನದಲ್ಲಿ ಅಕ್ರಮವಾಗಿ ನಕಲಿ

ಮದ್ಯ ಮತ್ತು ನಕಲಿ ಮದ್ಯ ತಯಾರಿಕಾ ವಸ್ತುಗಳನ್ನು ಹೊಂದುವುದು / ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ (1) ನಾರಾಯಣ ಮತ್ತು (2) ಬಿ.ಸಿ.ಸ್ವಾಮಿ ಇವರುಗಳನ್ನು ದಸ್ತಗಿರಿ ಮಾಡಲಾಗಿರುತ್ತದೆ. ಸದರಿ ಆರೋಪಿಗಳು ಈ ಪ್ರಾಧಿಕಾರದ ಮುಂದೆ ಹಾಜರಾಗಿ, ತಮ್ಮ ನಿಲುವು ಏನೆಂಬುದನ್ನು ತಿಳಿಸಿರುವುದಿಲ್ಲ. ವಾಹನ ಮಾಲೀಕತ್ವದ ವಿವರವನ್ನು ಕೋರಿ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಮತ್ತು ಸಾರಿಗೆ ಆಯುಕ್ತರಿಗೆ ಪತ್ರ ವ್ಯವಹಾರ ನಡೆಸಿದ್ದರೂ ಸಹ ಇದೂವರೆವಿಗೂ ಅವರಿಂದ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ. ಅಲ್ಲದೇ ವಾಹನ ಬಿಡುಗಡೆಗಾಗಿ ಆರೋಪಿ / ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆದಿರುವುದಿಲ್ಲ ಹಾಗೂ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಸ್ತಾವನೆ ಮತ್ತು 43(ಬಿ)(1)(2) ಪ್ರತಿವಾದಿಗಳ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಅವರು ಪ್ರಾಧಿಕಾರದ ಮುಂದೆ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಜಪ್ತು ಪಡಿಸಲಾದ ಮಾದಕ ದ್ರವ್ಯಗಳಲ್ಲಿ ಆಲ್ಕೋಹಾಲ್ ಅಂಶದ ಪ್ರಮಾಣ ಪತ್ತೆಯಾಗಿರುವುದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 17 ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ ಈ ಬಗ್ಗೆ ತಾನು ವಿಚಾರಣೆಯನ್ನು ನಡೆಸುತ್ತೇನೆಂದಾಗಲೀ ಯಾರೂ ಇಂದಿನವರೆಗೂ ಖುದ್ದಾಗಿ ಆಗಲಿ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನದ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ / ವಾಹನದ ಮಾಲೀಕರಿಗೆ ಅಥವಾ ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲವಾದುದರಿಂದ ಸದರಿ ವಾಹನವನ್ನು ಇನ್ನೂ ಹಾಗೆಯೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/105/07–08, ದಿನಾಂಕ:26ನೇ ಫೆಬ್ರವರಿ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ)(1)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು–2, (ಜಾರಿ ಮತ್ತು ತನಿಖೆ), ಮೈಸೂರು ಉತ್ತರ ತಾಲ್ಲೂಕು ಇವರ ಪ್ರಮಾವ ಸಂಖ್ಯೆ : 02/07-08, ದಿನಾಂಕ : 13-08-07ರಂದು ವಶಪಡಿಸಿಕೊಂಡ TN–38/Y-2500 ನೋಂದಣಿ ಸಂಖ್ಯೆಯ ಸಿಯೆಲ್ಲೋ ಕಾರ್ ವಾಹನವನ್ನು (60.480 ಲೀ. ಮದ್ಯ, 5 ಲೀ. ಮದ್ಯಸಾರ, 135 ಲೀ. ಬ್ಲೆಂಡ್ ಮದ್ಯ, ಮುಚ್ಚಳಗಳು, ಅಡ್ಹೆಸಿವ್ ಲೇಬಲ್‌ಗಳು, ಖಾಲಿ ಸೀಸೆಗಳು ಮತ್ತು ಇತರೆ ವಸ್ತುಗಳನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿರುತ್ತದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿಯ ಫೆಬ್ರವರಿ ತಿಂಗಳ 26ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಲಾಗಿದೆ.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**

ಪಿ.ಆರ್.324

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ : ಡಿಟಿಸಿಆರ್ : 177/07-08**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಫಿರ್ಯಾದುದಾರರು** | **ಪ್ರತಿವಾದಿ/ ಆರೋಪಿ** |
|---|---|
| ಪಿ. ರಮೇಶ್, ಅಬಕಾರಿ ಉಪ ನಿರೀಕ್ಷಕರು–2, (ಜಾರಿ ಮತ್ತು ತನಿಖೆ), ಟಿ.ನರಸೀಪುರ. | 1) ಎಂ. ವಿಜಯ ಬಿನ್ ಮಹದೇವ ಬೋರೇಗೌಡ, ಅಂಕನಹಳ್ಳಿ, ಬನ್ನೂರು ಹೋಬಳಿ, ಟಿ.ನರಸೀಪುರ ತಾ:<br>2) ನಾಗರಾಜು ಬಿನ್ ಮಹದೇವ @ ತಲೆಬುರುಡೆ, ಅಂಕನಹಳ್ಳಿ, ಬನ್ನೂರು ಹೋಬಳಿ, ಟಿ.ನರಸೀಪುರ ತಾ: |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ : 22-09-07ರಂದು ಬೆಳಿಗ್ಗೆ 4-15 ಗಂಟೆಯ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು–2, (ಜಾರಿ ಮತ್ತು ತನಿಖೆ), ಟಿ.ನರಸೀಪುರ ಇವರು ಟಿ.ನರಸೀಪುರ ತಾಲ್ಲೂಕು, ಬನ್ನೂರು ಹೋಬಳಿ, ಗುಡ್ಡದ ಕೊಪ್ಪಲು ಸರ್ಕಲ್‌ನಿಂದ ಅಂಕನಹಳ್ಳಿ ಗ್ರಾಮಕ್ಕೆ ಹೋಗುವ ರಸ್ತೆಯಲ್ಲಿ ಅಂಬಾಸಿಡರ್ ಕಾರ್ ಸಂ: KA–19/M-2345 ರಲ್ಲಿ ಅಕ್ರಮವಾಗಿ 112.320 ಲೀ. ನಕಲಿ ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದ್ದಕ್ಕಾಗಿ ವಾಹನ ಮತ್ತು ನಕಲಿ ಮದ್ಯವನ್ನು ವಶಪಡಿಸಿಕೊಂಡು, ಪ್ರ.ಮಾ.ವ ಸಂಖ್ಯೆ 05/07-08ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11 ಮತ್ತು 14ರ ಪ್ರಕಾರ ಅಪರಾಧವಾಗಿದ್ದು, ಕಲಂ 32 ಪ್ರಕಾರ ಶಿಕ್ಷಾರ್ಹವಾದ್ದರಿಂದ 1ನೇ ಆರೋಪಿಯನ್ನು ದಸ್ತಗಿರಿ ಮಾಡಿರುವುದಾಗಿ ಮೊಕದ್ದಮೆಯನ್ನು ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಕರಣದ ಆರೋಪಿಗಳಾದ ಎಂ.ವಿಜಯ್, ನಾಗರಾಜು, ಪುಟ್ಟರಾಜು ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ:14-11-07 ರಂದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೋಂದಣಿ ಅಂಚೆ ಮೂಲಕ ಜಾರಿಗೊಳಿಸಲಾಗಿದ್ದು, ಸ್ವೀಕೃತಿಯು ಈ ಪ್ರಾಧಿಕಾರಕ್ಕೆ ದಿನಾಂಕ : 20-11-07ರಂದು ಸ್ವೀಕೃತವಾಗಿರುತ್ತದೆ. ಹಾಗೆಯೇ ವಾಹನದ ಮಾಲೀಕತ್ವದ ವಿವರವನ್ನು ಕೋರಿ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರಿಗೆ ದಿನಾಂಕ:14-11-07, 17-01-08 ಮತ್ತು 15-07-08ರಂದು ಪತ್ರ ವ್ಯವಹಾರ ನಡೆಸಲಾಗಿರುತ್ತದೆ. ಈ ಪ್ರಕರಣದಲ್ಲಿ ಜಪ್ತುಗೊಳಿಸಲಾದ 112.320 ಲೀ. (ನಕಲಿ ಒರಿಜಿನಲ್ ಛಾಯ್ಸ್ ಎಂದು ಲೇಬಲ್ ಇರುವ) ನಕಲಿ ಮದ್ಯವನ್ನು ಕರ್ನಾಟಕ ಅಬಕಾರಿ ಕಾಯ್ದೆ ರೀತ್ಯಾ ದಿ: 28-01-2008ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ಹೊರಡಿಸಲಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನೀಡಿರುವ ಬಿ ವಹಿರನ್ವಯ ನಜೂರ್ ಅಹಮದ್ ಬಿನ್ ಎ.ಎಂ. ಅಹಮದ್, ಹಂಜಾ, ಬಿ.ಎಂ. ರಸ್ತೆ, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ ಇವರಿಗೆ ಈ ಪ್ರಾಧಿಕಾರದಿಂದ ದಿ : 23-09-2008ರಂದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೋಂದಣಿ ಅಂಚೆ ಮೂಲಕ ಜಾರಿಗೊಳಿಸಲಾಗಿದ್ದು, ಅಂಚೆ ಇಲಾಖೆಯವರು ವಿಳಾಸದಲ್ಲಿಲ್ಲವೆಂಬ ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ಹಿಂದಿರುಗಿಸಿರುತ್ತಾರೆ.

ಕಡತ ಪರಿಶೀಲಿಸಲಾಯಿತು. ಕೆಳಕಂಡ ದಾಖಲಾತಿಗಳು ಕಂಡುಬಂದಿರುತ್ತವೆ.

1. ಶೋಧನಾ ಸಮುಚಿತ ಆಧಾರ
2. ಮಹಜರ್ ಕ್ರಮ
3. ಮಾದರಿ ಮೊಹರಿನ ನಕಲು
4. ಪ್ರಥಮ ಮಾಹಿತಿ ವರದಿ.
5. ಮಾಲುಪಟ್ಟಿ
6. ರಾಸಾಯನಿಕ ತಜ್ಞರ ವರದಿ.

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ : 22-09-07ರಂದು ಟಿ.ನರಸೀಪುರ ತಾಲ್ಲೂಕು, ಬನ್ನೂರು ಹೋಬಳಿ, ಗುಡ್ಡದ ಕೊಪ್ಪಲು ಸರ್ಕಲ್‌ನಿಂದ ಅಂಕನಹಳ್ಳಿ ಗ್ರಾಮಕ್ಕೆ ಹೋಗುವ ರಸ್ತೆಯಲ್ಲಿ ಅಂಬಾಸಿಡರ್ ಕಾರ್ ಸಂ: KA–19/M-2345 ರಲ್ಲಿ ಅಕ್ರಮವಾಗಿ 112.320 ಲೀ. ನಕಲಿ ಮದ್ಯವನ್ನು ಯಾವುದೇ ರಹದಾರಿಯಿಲ್ಲದೆ ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ (1) ಎಂ. ವಿಜಯ್ ಇವರನ್ನು ದಸ್ತಗಿರಿ ಮಾಡಲಾಗಿರುತ್ತದೆ. ಸದರಿ ಆರೋಪಿಯು ಈ ಪ್ರಾಧಿಕಾರದ ಮುಂದೆ ಹಾಜರಾಗಿ, ತಮ್ಮ ನಿಲುವು ಏನೆಂಬುದನ್ನು ತಿಳಿಸಿರುವುದಿಲ್ಲ. ಅಲ್ಲದೇ ಬಿ ವಹಿರನ್ವಯ ವಾಹನ ಮಾಲೀಕರಾದ ನಜೂರ್ ಅಹಮದ್ ಬಿನ್ ಎ.ಎಂ. ಅಹಮದ್, ಹಂಜಾ, ಬಿ.ಎಂ. ರಸ್ತೆ, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ ಇವರ ಒಡೆತನದಲ್ಲಿದ್ದು, ವಾಹನ ಬಿಡುಗಡೆಗಾಗಿ ಆರೋಪಿ/ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆದಿರುವುದಿಲ್ಲ ಹಾಗೂ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಸ್ತಾವನೆ ಮತ್ತು 43(ಬಿ)(1)(2) ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಅವರು ಪ್ರಾಧಿಕಾರದ ಮುಂದೆ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಜಪ್ತು ಪಡಿಸಲಾದ ಮಾದಕ ದ್ರವ್ಯಗಳಲ್ಲಿ ಆಲ್ಕೋಹಾಲ್ ಅಂಶದ ಪ್ರಮಾಣ ಪತ್ತೆಯಾಗಿರುವುದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 17 ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ ಈ ಬಗ್ಗೆ ತಾನು ವಿಚಾರಣೆಯನ್ನು ನಡೆಸುತ್ತೇನೆಂದಾಗಲೀ ಯಾರೂ ಇಂದಿನವರೆಗೂ ಖುದ್ದಾಗಿ ಆಗಲಿ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನದ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ ಅಥವಾ ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲವಾದುದರಿಂದ ಸದರಿ ವಾಹನವನ್ನು ಇನ್ನೂ ಹಾಗೆಯೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/177/07–08, ದಿನಾಂಕ:26ನೇ ಫೆಬ್ರವರಿ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ)(1)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು–2, (ಜಾರಿ ಮತ್ತು ತನಿಖೆ), ಟಿ.ನರಸೀಪುರ ಇವರ ಪ್ರಮಾವ ಸಂಖ್ಯೆ : 05/07-08, ದಿನಾಂಕ:22-09-07ರಂದು ವಶಪಡಿಸಿಕೊಂಡ KA–19/M-2345 ನೋಂದಣಿ ಸಂಖ್ಯೆಯ ಅಂಬಾಸಿಡರ್ ವಾಹನವನ್ನು (112.320 ಲೀ. ನಕಲಿ ಮದ್ಯವನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿರುತ್ತದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿಯ ಫೆಬ್ರವರಿ ತಿಂಗಳ 26ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಲಾಗಿದೆ.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.325

## ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ : ಡಿಟಿಸಿಆರ್ : 143/07-08**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್
ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಫಿರ್ಯಾದುದಾರರು** | **ಪ್ರತಿವಾದಿ** |
|---|---|
| ಎಂ.ಎನ್.ಸುಸನ್ನ<br>ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ. | ಆರೋಪಿ ಪರಾರಿಯಾಗಿರುತ್ತಾನೆ |

**ಪ್ರಕರಣದ ಮುಖ್ಯಾಂಶಗಳು :**

ದಿನಾಂಕ : 01-09-07ರಂದು ರಾತ್ರಿ 7-30 ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ ಇವರು ನಂಜನಗೂಡು ತಾಲ್ಲೂಕು, ನಂಜನಗೂಡು– ಟಿ.ನರಸೀಪುರ ಮುಖ್ಯ ರಸ್ತೆಯಲ್ಲಿ ಬರುವ ಆಲಂಬೂರು ಗ್ರಾಮದ ಬಸ್ ನಿಲ್ದಾಣದ ಬಳಿ ಹಿರೋಪುಕ್ ಮೊಪೆಡ್ ಸಂ: KA–09/L-2748 ರಲ್ಲಿ ಅಕ್ರಮವಾಗಿ 8.640 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆಪಾದನೆಗಾಗಿ ವಾಹನ ಮತ್ತು ಮದ್ಯವನ್ನು ವಶಪಡಿಸಿಕೊಂಡು, ಪ್ರ.ಮಾ.ವ ಸಂಖ್ಯೆ 02/07-08 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11 ರ ಪ್ರಕಾರ ಅಪರಾಧವಾಗಿದ್ದು ಕಲಂ 32 ಪ್ರಕಾರ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆಯನ್ನು ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕತ್ವದ ವಿವರವನ್ನು ಕೋರಿ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರಿಗೆ ದಿನಾಂಕ : 14-11-07 ಮತ್ತು 17-01-08 ರಂದು ಪತ್ರ ವ್ಯವಹಾರ ನಡೆಸಲಾಗಿರುತ್ತದೆ. ಈ ಪ್ರಕರಣದಲ್ಲಿ ಜಪ್ತುಗೊಳಿಸಲಾದ 8.640 ಲೀ. ಮದ್ಯವನ್ನು ಕರ್ನಾಟಕ ಅಬಕಾರಿ ಕಾಯ್ದೆ ರೀತ್ಯಾ ದಿ: 14-11-07 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿರುತ್ತದೆ. ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರು ಸದರಿ ವಾಹನದ ಬಿ.ವಹಿಯ ಪ್ರತಿಯನ್ನು ಸಂಬಂಧಪಟ್ಟ ಸಾರಿಗೆ ಪ್ರಾಧಿಕಾರದಿಂದ ಪಡೆದು ತಮ್ಮ ಪತ್ರ ದಿನಾಂಕ :19-11-2008 ರಲ್ಲಿ ಸಲ್ಲಿಸಿರುತ್ತಾರೆ. ಬಿ ವಹಿಯಲ್ಲಿ ನಮೂದಿಸಿರುವಂತೆ ಡಾ. ಎ. ಸದಾನಂದ ಶೆಟ್ಟಿ ಬಿನ್ ಟಿ. ಗೋವಿಂದ ಶೆಟ್ಟಿ, ನಂ.79/1, 2ನೇ ಮೈನ್, ಜಯಲಕ್ಷ್ಮಿಪುರಂ, ಮೈಸೂರು ಇವರ ವಾಹನ ಮಾಲೀಕರರಾಗಿರುತ್ತಾರೆ. ಸದರಿ ಮಾಲೀಕರಿಗೆ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ 43(ಬಿ) ರ ಅಡಿಯಲ್ಲಿ ಕಾರಣ ಕೇಳಿ ನೊಟೀಸನ್ನು ನೋಂದಣಿ ಅಂಚೆ ಮೂಲಕ ಜಾರಿಗೊಳಿಸಲಾಗಿದ್ದು, ವಿಳಾಸದಲ್ಲಿ ಇಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ಪ್ರಾಧಿಕಾರಕ್ಕೆ ಹಿಂದಿರುಗಿಸಿರುತ್ತಾರೆ.

ಕಡತ ಪರಿಶೀಲಿಸಲಾಯಿತು. ಕೆಳಕಂಡ ದಾಖಲಾತಿಗಳು ಕಂಡುಬಂದಿರುತ್ತವೆ.

1. ಪ್ರಥಮ ಮಾಹಿತಿ ವರದಿ.
2. ಮಹಜರ್ ಕ್ರಮ.
3. ಜಡ್ತಿ ಪತ್ರ.
4. 457 – ಮಾಲು ಪಟ್ಟಿ.
5. ರಾಸಾಯನಿಕ ತಜ್ಞರ ವರದಿ.
6. ಮಹಜರ್ ಕ್ರಮ.

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ : 01-09-07ರಂದು, ನಂಜನಗೂಡು– ಟಿ.ನರಸೀಪುರ ಮುಖ್ಯ ರಸ್ತೆಯಲ್ಲಿ ಬರುವ ಆಲಂಬೂರು ಗ್ರಾಮದ ಬಸ್ ನಿಲ್ದಾಣದ ಬಳಿ ಹಿರೋಪುಕ್ ಮೊಪೆಡ್ ಸಂ: KA-09/ L-2748 ರಲ್ಲಿ ಅಕ್ರಮವಾಗಿ 8.640 ಲೀ. ಮದ್ಯವನ್ನು ಯಾವುದೇ ರಹದಾರಿಯಿಲ್ಲದೆ ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿಯು ಪರಾರಿಯಾಗಿದ್ದು ಸದರಿ ಆರೋಪಿಯಾಗಲೀ ಈ ಪ್ರಾಧಿಕಾರದ ಮುಂದೆ ಹಾಜರಾಗಿ, ತಮ್ಮ ನಿಲುವು ಏನೆಂಬುದನ್ನು ತಿಳಿಸಿರುವುದಿಲ್ಲ. ಅಲ್ಲದೇ ಬಿ ವಹಿರನ್ವಯ ವಾಹನ ಮಾಲೀಕರಾದ ಡಾ. ಎ. ಸದಾನಂದ ಶೆಟ್ಟಿ ಬಿನ್ ಟಿ. ಗೋವಿಂದ ಶೆಟ್ಟಿ, ನಂ.79/1, 2ನೇ ಮೈನ್, ಜಯಲಕ್ಷ್ಮಿಪುರಂ, ಮೈಸೂರು ಇವರ ಒಡೆತನದಲ್ಲಿದ್ದು, ವಾಹನ ಬಿಡುಗಡೆಗಾಗಿ ಆರೋಪಿ / ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆದಿರುವುದಿಲ್ಲ ಹಾಗೂ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಸ್ತಾವನೆ ಮತ್ತು 43 (ಬಿ) (1) (2) ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಅವರು ಪ್ರಾಧಿಕಾರದ ಮುಂದೆ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಜಪ್ತು ಪಡಿಸಲಾದ ಮಾದಕ ದ್ರವ್ಯಗಳಲ್ಲಿ ಆಲ್ಕೋಹಾಲ್ ಅಂಶದ ಪ್ರಮಾಣ ಪತ್ತೆಯಾಗಿರುವುದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 16 ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ ಈ ಬಗ್ಗೆ ತಾನು ವಿಚಾರಣೆಯನ್ನು ನಡೆಸುತ್ತೇನೆಂದಾಗಲೀ ಯಾರೂ ಇಂದಿನವರೆಗೂ ಖುದ್ದಾಗಿ ಆಗಲಿ ಅಥವಾ ತನ್ನ ವಕೀಲರ ಮೂಲಕವಾಗಲೀ ತನ್ನ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನದ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ ಅಥವಾ ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲವಾದುದರಿಂದ ಸದರಿ ವಾಹನವನ್ನು ಇನ್ನೂ ಹಾಗೆಯೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/143/07–08, ದಿನಾಂಕ:26ನೇ ಫೆಬ್ರವರಿ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ)(1)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ ಇವರ ಪ್ರಮಾವ ಸಂಖ್ಯೆ:02/07-08, ದಿನಾಂಕ:01-09-07ರಂದು ವಶಪಡಿಸಿಕೊಂಡ ಹಿರೋಪುಕ್ ಮೊಪೆಡ್ ಸಂ: KA-09/ L-2748 ವಾಹನವನ್ನು (8.640 ಲೀ. ನಕಲಿ ಮದ್ಯವನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿರುತ್ತದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿಯ ಫೆಬ್ರವರಿ ತಿಂಗಳ 26ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಲಾಗಿದೆ.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**

ಪಿ.ಆರ್.326

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

## ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ : ಡಿಟಿಸಿಆರ್ : 117/07-08**

**ಉಪಸ್ಥಿತರು:** ಡಾ।। ವೈ. ಮಂಜುನಾಥ್
ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಫಿರ್ಯಾದುದಾರರು** | **ಪ್ರತಿವಾದಿ/ ಆರೋಪಿ** |
|---|---|
| ಪಿ. ಪ್ರೇಮಾ, | 1) ರವಿ ಬಿನ್ ಲೇ ಶಿವಣ್ಣ |
| ಅಬಕಾರಿ ಉಪ ನಿರೀಕ್ಷಕರು–2, | ಹಿರಿಕಾಟಿ ಗ್ರಾಮ, ಗುಂಡ್ಲುಪೇಟೆ ತಾ: |
| (ಜಾರಿ ಮತ್ತು ತನಿಖೆ), ನಂಜನಗೂಡು ವಲಯ. | 2) ಚಂದ್ರು ಬಿನ್ ಮರಿಸ್ವಾಮಿ |
| | ಬಾಳ್ಳಾರು ಗ್ರಾಮ, ನಂ.ಗೂಡು ತಾ: |

**ಪ್ರಕರಣದ ಮುಖ್ಯಾಂಶಗಳು :**

ದಿನಾಂಕ : 25-08-07ರಂದು ಸಂಜೆ 6-30 ಗಂಟೆಯ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು–2, (ಜಾರಿ ಮತ್ತು ತನಿಖೆ), ನಂಜನಗೂಡು ವಲಯ ಇವರು ನಂಜನಗೂಡು ತಾಲ್ಲೂಕು, ನಂಜನಗೂಡು–ಗುಂಡ್ಲುಪೇಟೆಗೆ ಮುಖ್ಯ ರಸ್ತೆ, ಸುರುಚಿ ಉಪ್ಪಿನಕಾಯಿ ಫ್ಯಾಕ್ಟರಿ ಮುಂಭಾಗದಲ್ಲಿ ಅಕ್ರಮವಾಗಿ 17.280 ಲೀ. ಮದ್ಯವನ್ನು KL–11/E-9184 ನೋಂದಣಿ ಸಂಖ್ಯೆಯ ಆಟೋ ರಿಕ್ಷಾ ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಅಪರಾಧಕ್ಕಾರಿ ವಾಹನ ಮತ್ತು ಮದ್ಯವನ್ನು ಜಫ್ತುಗೊಳಿಸಿ, ಪ್ರ.ಮಾ.ವ ಸಂಖ್ಯೆ 03/07-08ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 13ರ ಪ್ರಕಾರ ಅಪರಾಧವಾಗಿದ್ದು, ಕಲಂ 32, 38(A) ಪ್ರಕಾರ ಶಿಕ್ಷಾರ್ಹವಾದ್ದರಿಂದ ಪ್ರಕರಣ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಕರಣದ ಆರೋಪಿಗಳಾದ ರವಿ ಮತ್ತು ಚಂದ್ರು ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ:18-9-07 ರಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೋಂದಣಿ ಅಂಚೆ ಮೂಲಕ ಜಾರಿಗೊಳಿಸಲಾಗಿದ್ದು, ಸದರಿ ನೋಟೀಸ್ ಜಾರಿಯಾಗಿ, ಸ್ವೀಕೃತಿಯು ಈ ಪ್ರಾಧಿಕಾರಕ್ಕೆ ದಿನಾಂಕ:22-09-07 ಮತ್ತು 25-09-07ರಂದು ಸ್ವೀಕೃತವಾಗಿರುತ್ತದೆ. ಹಾಗೆಯೇ ವಾಹನದ ಮಾಲೀಕತ್ವದ ವಿವರವನ್ನು ಕೋರಿ, ಪ್ರಾದೇಶಿಕ ಸಾರಿಗೆ ಆಯುಕ್ತರು, ತ್ರಿವೆಂಡ್ರಮ್ ಜಿಲ್ಲೆ, ಕೇರಳಾ ರಾಜ್ಯ ಇವರಿಗೆ ದಿನಾಂಕ:18-09-07 ರಂದು ಪತ್ರ ವ್ಯವಹಾರ ನಡೆಸಲಾಗಿರುತ್ತದೆ. ನಂಜನಗೂಡು ತಾಲ್ಲೂಕಿನ ಜಾರಿ ಮತ್ತು ತನಿಖೆಯ ಅಬಕಾರಿ ಉಪ ನಿರೀಕ್ಷಕರು–2 ತಮ್ಮ ಪತ್ರ ದಿನಾಂಕ:15-11-07 ರಲ್ಲಿ ಜಫ್ತುಗೊಳಿಸಲಾದ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಅಂತೆಯೇ ಈ ಪ್ರಕರಣದಲ್ಲಿ ಜಫ್ತುಗೊಳಿಸಲಾದ 17.280 ಲೀ. ಮದ್ಯವನ್ನು (ಮಾದರಿ ಹೊರತುಪಡಿಸಿ) ದಿನಾಂಕ :19-11-07 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ಹೊರಡಿಸಲಾಗಿದೆ.

ಕೋಝಿಕ್ಕೋಡ್ ಜಿಲ್ಲೆಯ ಸಾರಿಗೆ ಪ್ರಾಧಿಕಾರವು ವಾಹನದ ಮಾಲಿಕತ್ವವುಳ್ಳ ಬಿ ವಹಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿರುತ್ತಾರೆ. ಅದರಂತೆ ವಾಹನ ಮಾಲೀಕರಾದ ಜಿನೇಶ್ ಬಿನ್ ಸದೀಶನ್ ಇವರಿಗೆ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಈ ಪ್ರಾಧಿಕಾರದಿಂದ ದಿನಾಂಕ:07-02-08ರಂದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಬಿ)ರಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೀಡಲಾಗಿದ್ದು, ಸದರಿ ನೋಟಿಸ್ ಜಾರಿಯಾಗಿ, ಸ್ವೀಕೃತಿಯು ದಿನಾಂಕ:15-02-08 ರಂದು ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ನೋಟೀಸಿಗೆ ಪ್ರತಿಕ್ರಿಯಿಸಿ, ಯಾವುದೇ ಅಪರಾಧದಲ್ಲಿ ತೊಡಗಿರುವುದಿಲ್ಲವೆಂದು ಆರೋಪವನ್ನು ಅಲ್ಲಗೆಳೆದು, ಮುಂದಿನ ನಡವಳಿಯನ್ನು ಕೈಬಿಡಬೇಕೆಂದು ತಿಳಿಸಿರುತ್ತಾರೆ. ಪ್ರಕರಣದಲ್ಲಿ ಲಭ್ಯವಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ದಿನಾಂಕ: 25-08-07 ರಂದು ನಂಜನಗೂಡು ತಾಲ್ಲೂಕು, ನಂಜನಗೂಡು–ಗುಂಡ್ಲುಪೇಟೆ ಮುಖ್ಯ ರಸ್ತೆ, ಸುರುಚಿ ಉಪ್ಪಿನಕಾಯಿ ಫ್ಯಾಕ್ಟರಿ ಮುಂಭಾಗದಲ್ಲಿ ಅಕ್ರಮವಾಗಿ 17.280 ಲೀ. ಮದ್ಯವನ್ನು KL–11/E-9184 ನೋಂದಣಿ ಸಂಖ್ಯೆಯ ಆಟೋ ರಿಕ್ಷಾ ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ (1) ರವಿ ಮತ್ತು (2) ಚಂದ್ರು ಇವರುಗಳನ್ನು ದಸ್ತಗಿರಿ ಮಾಡಲಾಗಿರುತ್ತದೆ. ಸದರಿ ಆರೋಪಿಗಳು ಈ ಪ್ರಾಧಿಕಾರದ ಮುಂದೆ ಹಾಜರಾಗಿ, ತಮ್ಮ ನಿಲುವು ಏನೆಂಬುದನ್ನು ತಿಳಿಸಿರುವುದಿಲ್ಲ. ಅಲ್ಲದೇ ಬಿ ವಹಿರನ್ವಯ ವಾಹನ ಮಾಲೀಕರಾದ ಜಿನೇಶ್ ಬಿನ್ ಸದೀಶನ್, ಕೋಝಿಕ್ಕೋಡ್ ಜಿಲ್ಲೆ, ಕೇರಳಾ ರಾಜ್ಯ ಇವರ ಒಡೆತನದಲ್ಲಿದ್ದು, ವಾಹನ ಬಿಡುಗಡೆಗಾಗಿ ಆರೋಪಿ/ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆದಿರುವುದಿಲ್ಲ ಹಾಗೂ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಸ್ತಾವನೆ ಮತ್ತು 43(ಬಿ)(1)(2) ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಅವರು ಪ್ರಾಧಿಕಾರದ ಮುಂದೆ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ಜಪ್ತು ಪಡಿಸಲಾದ ಮಾದಕ ದ್ರವ್ಯಗಳಲ್ಲಿ ಆಲ್ಕೋಹಾಲ್ ಅಂಶದ ಪ್ರಮಾಣ ಪತ್ತೆಯಾಗಿರುವುದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 17 ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ ಈ ಬಗ್ಗೆ ತಾನು ವಿಚಾರಣೆಯನ್ನು ನಡೆಸುತ್ತೇನೆಂದಾಗಲೀ ಯಾರೂ ಇಂದಿನವರೆಗೂ ಖುದ್ದಾಗಿ ಆಗಲಿ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನದ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ ಅಥವಾ ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲವಾದುದರಿಂದ ಸದರಿ ವಾಹನವನ್ನು ಇನ್ನೂ ಹಾಗೆಯೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/117/07–08, ದಿನಾಂಕ:26ನೇ ಫೆಬ್ರವರಿ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ)(2)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು–2, (ಜಾರಿ ಮತ್ತು ತನಿಖೆ),

ನಂಜನಗೂಡು ತಾಲ್ಲೂಕು ಇವರ ಪ್ರಮಾವ ಸಂಖ್ಯೆ : 03/07-08, ದಿನಾಂಕ : 25-08-07ರಂದು ವಶಪಡಿಸಿಕೊಂಡ KL-11/E-9184 ನೋಂದಣಿ ಸಂಖ್ಯೆಯ ಆಟೋ ರಿಕ್ಷಾ ವಾಹನವನ್ನು (17.280 ಲೀ. ಮದ್ಯವನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿರುತ್ತದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿಯ ಫೆಬ್ರವರಿ ತಿಂಗಳ 26ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಲಾಗಿದೆ.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ|| ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.327

## ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ : ಡಿಟಿಸಿಆರ್ : 106/07-08**

**ಉಪಸ್ಥಿತರು:** ಡಾ|| ವೈ. ಮಂಜುನಾಥ್
ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಫಿರ್ಯಾದುದಾರರು**

ಪಿ. ರಮೇಶ್,
ಅಬಕಾರಿ ಉಪ ನಿರೀಕ್ಷಕರು–2, (ಜಾರಿ ಮತ್ತು ತನಿಖೆ),
ಟಿ.ನರಸೀಪುರ.

**ಪ್ರತಿವಾದಿ/ ಆರೋಪಿ**

1) ರಾಘವ ಬಿನ್ ರಂಗಸ್ವಾಮಿ,
ಸಂ. 393, ಅತ್ತಹಳ್ಳಿ ಗ್ರಾಮ, ಬನ್ನೂರು ಹೋಬಳಿ,
ಟಿ.ನರಸೀಪುರ ತಾ:
2) ರಂಗಸ್ವಾಮಿ ಬಿನ್ ಹೊನ್ನಗಿರಿಗೌಡ,
ಅತ್ತಹಳ್ಳಿ, ಬನ್ನೂರು ಹೋಬಳಿ, ಟಿ.ನರಸೀಪುರ ತಾ:
3) ಗಿರೀಶ್ ಬಿನ್ ಸಿದ್ದೇಗೌಡ,
ಅತ್ತಹಳ್ಳಿ, ಬನ್ನೂರು ಹೋಬಳಿ, ಟಿ.ನರಸೀಪುರ ತಾ:
4) ರಾಜು ಬಿನ್ ಚಿಕ್ಕೇಗೌಡ,
ಅತ್ತಹಳ್ಳಿ, ಬನ್ನೂರು ಹೋಬಳಿ, ಟಿ.ನರಸೀಪುರ ತಾ:

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ : 14-08-07ರಂದು ಬೆಳಿಗ್ಗೆ 7-00 ಗಂಟೆಯ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು–2, (ಜಾರಿ ಮತ್ತು ತನಿಖೆ), ಟಿ.ನರಸೀಪುರ ಇವರು ಟಿ.ನರಸೀಪುರ ತಾಲ್ಲೂಕು, ಬನ್ನೂರು ಹೋಬಳಿ, ಅತ್ತಳ್ಳಿ ಗ್ರಾಮ ಮನೆ ನಂ. 393 ಮತ್ತು 393/1 ರಲ್ಲಿ ಅಕ್ರಮವಾಗಿ 45 ಲೀ. ನಕಲಿ ಮದ್ಯ, 180 ಮಿ. ಯ 150 ಖಾಲಿ ಸೀಸೆಗಳು, 10 ರೋಲ್ ಭದ್ರತಾ ಚೀಟಿಗಳು, 1200 ಒರಿಜಿನಲ್ ಛಾಯ್ಸ್ ಬಾಟಲಿ ಮುಚ್ಚಳಗಳು, ಒರಿಜಿನಲ್ ಛಾಯ್ಸ್ ಲೇಬಲ್‌ಗಳು, 10 ಲೀ. (ಬ್ಲೆಂಡ್) ಶೋಧಿಕೃತ ಮದ್ಯ ಮತ್ತು ಇವುಗಳ ಸಾಗಾಣಿಕೆಗಾಗಿ KA–04/K-8144 ನೋಂದಣಿ ಸಂಖ್ಯೆಯ ಬಜಾಜ್ ಸ್ಕೂಟರ್ ವಾಹನವನ್ನು ಉಪಯೋಗಿಸುತ್ತಿದ್ದ ಅಪರಾಧಕ್ಕಾಗಿ ವಾಹನ, ನಕಲಿ ಮದ್ಯ ಮತ್ತು ನಕಲಿ ಮದ್ಯ ತಯಾರಿಕೆಗೆ ಅಗತ್ಯವಾದ ವಸ್ತುಗಳನ್ನು ವಶಪಡಿಸಿಕೊಂಡು, ಪ್ರ.ಮಾ.ವ ಸಂ: 02/07-08 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 14ರ ಪ್ರಕಾರ ಅಪರಾಧವಾಗಿದ್ದು, ಕಲಂ 32ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆಯನ್ನು ದಾಖಲಿಸಿ, ಒಂದನೇ ಆರೋಪಿಯನ್ನು ದಸ್ತಗಿರಿ ಮಾಡಿ ನ್ಯಾಯಾಲಯದ ಮುಂದೆ ಹಾಜರುಪಡಿಸಿರುವುದಾಗಿ ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಕರಣದ ಆರೋಪಿಗಳಾದ ಆರ್.ರಾಘವ, ರಂಗಸ್ವಾಮಿ, ಗಿರೀಶ್, ಪುಟ್ಟರಾಜು ಇವರಿಗೆ ಈ ಪ್ರಾಧಿಕಾರದಿಂದ ದಿ:18-09-07 ರಂದು ವಾಹನ ಮತ್ತು ಮಾದಕ ದ್ರವ್ಯಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೋಂದಣಿ ಅಂಚೆ ಮೂಲಕ ಜಾರಿಗೊಳಿಸಲಾಗಿದ್ದು, ಅಂಚೆ ಇಲಾಖೆಯವರು ವಿಳಾಸದಲ್ಲಿ ಇಲ್ಲವೆಂಬ ಷರಾದೊಂದಿಗೆ ಸದರಿ ನೋಟೀಸ್‌ಗಳನ್ನು ಈ ಪ್ರಾಧಿಕಾರಕ್ಕೆ ಹಿಂತಿರುಗಿಸಿರುತ್ತಾರೆ. ತಿ.ನರಸೀಪುರ (ಜಾ ಮತ್ತು ತ) ಅಬಕಾರಿ ಉಪ ನಿರೀಕ್ಷಕರು ಸದರಿ ವಾಹನದ ಬಿ ವಹಿಯ ಪ್ರತಿಯನ್ನು ಸಂಬಂಧಪಟ್ಟ ಸಾರಿಗೆ ಪ್ರಾಧಿಕಾರದಿಂದ ಪಡೆದು ಸಲ್ಲಿಸಿರುತ್ತಾರೆ. ಬಿ ವಹಿಯನ್ವಯ ಎಸ್.ಸಂತೋಷ್ ಬಿನ್ ನಾಯರ್, ಜಿ.ಎಸ್.ನಂ.119, 5ನೇ ಮೈನ್, ಮತ್ತಿಕೆರೆ ಬಡಾವಣೆ, ಬೆಂಗಳೂರು ಇವರ ಒಡೆತನದಲ್ಲಿದ್ದು, ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಈ ಪ್ರಾಧಿಕಾರದಿಂದ ದಿ:29-01-08ರಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳಿ ನೊಟೀಸನ್ನು

ನೋಂದಣಿ ಅಂಚೆಯ ಮೂಲಕ ಜಾರಿಗೊಳಿಸಲಾಗಿದ್ದು ಸದರಿ ನೊಟೀಸ್ ಸಹ ವಿಳಾಸದಲ್ಲಿ ಇಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂತಿರುಗಿಸಿರುತ್ತಾರೆ.

ಕಡತ ಪರಿಶೀಲಿಸಲಾಯಿತು. ಕೆಳಕಂಡ ದಾಖಲಾತಿಗಳು ಕಂಡುಬಂದಿರುತ್ತವೆ.

1. ಮಹಜರ್ ಕ್ರಮ
2. ಜಪ್ತಿ ಪತ್ರ
3. ಮಾದರಿ ಮೊಹರಿನ ನಕಲು
4. ಪ್ರಥಮ ಮಾಹಿತಿ ವರದಿ.
5. ಮಾಲು ಪಟ್ಟಿ
6. ರಾಸಾಯನಿಕ ತಜ್ಞರ ವರದಿ.

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:14-08-07ರಂದು ಟಿ.ನರಸೀಪುರ ತಾಲ್ಲೂಕು, ಬನ್ನೂರು ಹೋಬಳಿ, ಅತ್ತಳ್ಳಿ ಗ್ರಾಮ ಮನೆ ನಂ. 393 ಮತ್ತು 393/1 ರಲ್ಲಿ ಅಕ್ರಮವಾಗಿ 45 ಲೀ. ನಕಲಿ ಮದ್ಯ, 180 ಮಿ. ಯ 150 ಖಾಲಿ ಸೀಸೆಗಳು, 10 ರೋಲ್ ಭದ್ರತಾ ಚೀಟಿಗಳು, 1200 ಒರಿಜಿನಲ್ ಛಾಯ್ಸ್ ಬಾಟಲಿ ಮುಚ್ಚಳಗಳು, 1600 ಒರಿಜಿನಲ್ ಛಾಯ್ಸ್ ಲೇಬಲ್‌ಗಳು, 10 ಲೀ. ಬ್ಲೆಂಡ್ ಮದ್ಯ ಇವುಗಳ ಸಾಗಾಣಿಕೆಗಾಗಿ KA-04/K-8144 ನೋಂದಣಿ ಸಂಖ್ಯೆಯ ಬಜಾಜ್ ಸ್ಕೂಟರ್ ವಾಹನವನ್ನು ಸಾಗಾಣಿಕೆಯಲ್ಲಿ ಉಪಯೋಗಿಸಿರುವುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ (1) ಆರ್.ರಾಘವ ಬಿನ್ ರಂಗಸ್ವಾಮಿ ಇವರನ್ನು ದಸ್ತಗಿರಿ ಮಾಡಲಾಗಿರುತ್ತದೆ. ಸದರಿ ಆರೋಪಿಯಾಗಲೀ ಈ ಪ್ರಾಧಿಕಾರದ ಮುಂದೆ ಹಾಜರಾಗಿ, ತಮ್ಮ ನಿಲುವು ಏನೆಂಬುದನ್ನು ಇದುವರೆವಿಗೂ ತಿಳಿಸಿರುವುದಿಲ್ಲ. ಅಲ್ಲದೇ "ಬಿ" ವಹಿರನ್ವಯ ವಾಹನ ಮಾಲೀಕರಾದ ಎಸ್. ಸಂತೋಷ್ ಬಿನ್ ನಾಯರ್, ಜಿ.ಎಸ್.ನಂ.119, 5ನೇ ಮೈನ್, ಮತ್ತಿಕೆರೆ ಬಡಾವಣೆ, ಬೆಂಗಳೂರು ಇವರ ಒಡೆತನದಲ್ಲಿದ್ದು ವಾಹನ ಬಿಡುಗಡೆಗಾಗಿ ಆರೋಪಿ/ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆದಿರುವುದಿಲ್ಲ ಹಾಗೂ ಅಬಕಾರಿ ಕಾಯ್ದೆ ಕಲಂ 43ರ ಅಡಿಯಲ್ಲಿ ಪ್ರಸ್ತಾವನೆ ಮತ್ತು 43 (ಬಿ) (1) (2) ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಅವರು ಪ್ರಾಧಿಕಾರದ ಮುಂದೆ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಜಪ್ತು ಪಡಿಸಲಾದ ಮಾದಕ ದ್ರವ್ಯಗಳಲ್ಲಿ ಆಲ್ಕೋಹಾಲ್ ಅಂಶದ ಪ್ರಮಾಣ ಪತ್ತೆಯಾಗಿರುವುದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 18 ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ ಈ ಬಗ್ಗೆ ತಾನು ವಿಚಾರಣೆಯನ್ನು ನಡೆಸುತ್ತೇನೆಂದಾಗಲೀ ಯಾರೂ ಇಂದಿನವರೆಗೂ ಖುದ್ದಾಗಿ ಆಗಲಿ ಅಥವಾ ತನ್ನ ವಕೀಲರ ಮೂಲಕವಾಗಲೀ ತನ್ನ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನದ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ ಅಥವಾ ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲವಾದುದರಿಂದ ಸದರಿ ವಾಹನವನ್ನು ಇನ್ನೂ ಹಾಗೆಯೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/106/07–08, ದಿನಾಂಕ:26ನೇ ಫೆಬ್ರವರಿ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ)(2)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು–2, (ಜಾರಿ ಮತ್ತು ತನಿಖೆ), ಟಿ.ನರಸೀಪುರ ಇವರ ಪ್ರಮಾವ ಸಂಖ್ಯೆ :02/07-08, ದಿನಾಂಕ:14-08-07ರಂದು ವಶಪಡಿಸಿಕೊಂಡ KA-04/K-8144 ನೋಂದಣಿ ಸಂಖ್ಯೆಯ ಬಜಾಜ್ ಸ್ಕೂಟರ್ ವಾಹನವನ್ನು, 45 ಲೀ., 10 ಲೀ. ಬ್ಲೆಂಡ್ ಮದ್ಯ (ಮಾದರಿಯನ್ನು ಹೊರತು ಪಡಿಸಿ) ಮತ್ತು ಇತರೆ ನಕಲಿ ಮದ್ಯ ತಯಾರಿಕಾ ವಸ್ತುಗಳನ್ನು, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿಯ ಫೆಬ್ರವರಿ ತಿಂಗಳ 26ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಲಾಗಿದೆ.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**

ಪಿ.ಆರ್.328

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

## ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್/127/08–09, ದಿನಾಂಕ:28ನೇ ಏಪ್ರಿಲ್, 2009**

**ಉಪಸ್ಥಿತರು:** ಎ.ಎಸ್.ವಿಶ್ವರೂಪ

ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಫಿರ್ಯಾದುದಾರರು** | **ಪ್ರತಿವಾದಿ/ ಆರೋಪಿ** |
|---|---|
| ಅಬಕಾರಿ ಉಪ ನಿರೀಕ್ಷಕರು,<br>ಹುಣಸೂರು ವಲಯ, ಹುಣಸೂರು. | ಚಂದ್ರಶೇಖರ್ ಬಿನ್ ಶಿವಣ್ಣೇಗೌಡ, |

ದಿನಾಂಕ :12-09-2008ರಂದು ರಾತ್ರಿ 10-15 ಗಂಟೆಯ ಸಮಯದಲ್ಲಿ ಹುಣಸೂರು ವಲಯದ ಅಬಕಾರಿ ನಿರೀಕ್ಷಕರು ಇವರು ಹುಣಸೂರು ತಾಲ್ಲೂಕು, ಬಿಳಿಕೆರೆ ಹೋಬಳಿ, ಹುಂಡಿಮಾಳ ಗ್ರಾಮದ ಬಿಲ್ಡರ್ಸ್ ಬಡಾವಣೆ, ಮನೆ ನಂ.73, ಚಂದ್ರಶೇಖರ್ ಬಿನ್ ಶಿವಣ್ಣೇಗೌಡ ಇವರಿಗೆ ಸೇರಿದ ವಾಸದ ಮನೆಯಲ್ಲಿ ಅಕ್ರಮವಾಗಿ 40 ಲೀ. ಸಂಸ್ಕರಿಸಿದ ಮದ್ಯಸಾರ ಹಾಗೂ 0.720 ಲೀ. ಒರಿಜಿನಲ್ ಡಿಲಕ್ಸ್ ವಿಸ್ಕಿ ಹೆಸರಿನ ನಕಲಿ ಮದ್ಯವನ್ನು ಬಜಾಜ್ ಸಿಟಿ–100 ಸಂಖ್ಯೆ : KA–45/E-5063 ವಾಹನದಲ್ಲಿ ಸದರಿ ಮಾದಕ ದ್ರವ್ಯಗಳನ್ನು ಸಿದ್ದಮಾಡುತ್ತಿದ್ದ ಅಪರಾಧಕ್ಕಾಗಿ ವಾಹನ ಮತ್ತು ಮಾದಕ ದ್ರವ್ಯಗಳನ್ನು ವಶಪಡಿಸಿಕೊಂಡು, ಪ್ರ.ಮಾ.ವ ಸಂ. 03/08-09 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 13(1), (A)(F) ರ ರೀತ್ಯಾ ಅಪರಾಧವಾಗಿದ್ದು, ಕಲಂ 32, 38(A)ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಆರೋಪಿ ಚಂದ್ರಶೇಖರ್ ಬಿನ್ ಶಿವಣ್ಣೇಗೌಡ ಇವರು ಪರಾರಿಯಾಗಿರುವುದಾಗಿ ಮೊಕದ್ದಮೆಯನ್ನು ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕತ್ವದ ವಿವರವನ್ನು ಕೋರಿ, ಹುಣಸೂರಿನ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:03-3-09 ರಂದು ಈ ಪ್ರಾಧಿಕಾರದಿಂದ ಪತ್ರ ವ್ಯವಹಾರ ನಡೆಸಲಾಗಿರುತ್ತದೆ. ಸದರಿ ಬಿ ವಹಿಯಂತೆ ಸಂ. KA–45/E-5063 ವಾಹನದ ಮಾಲೀಕರಾದ ಶೇಖರ್ ಹೆಚ್.ಆರ್. ಬಿನ್ ರಾಜಣ್ಣ, ಸಂ. 248, ಹುಂಡಿಮಾಳ, ಹುಣಸೂರು ತಾಲ್ಲೂಕು– ಇವರಿಗೆ ವಾಹನ ಮತ್ತು ಅಬಕಾರಿ ವಸ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ)ರಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ನೋಟೀಸ್ ದಿನಾಂಕ:02.04.09 ರಂದು ಮಾಲೀಕರಿಗೆ ಜಾರಿಯಾಗಿ ಸ್ವೀಕೃತಿಯು ಈ ಪ್ರಾಧಿಕಾರಕ್ಕೆ ದಿ :16.04.09ರಂದು ಸ್ವೀಕೃತಿಯಾಗಿರುತ್ತದೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:12-09-2008ರಂದು ಹುಣಸೂರು ತಾಲ್ಲೂಕು ಬಿಳಿಕೆರೆ ಹೋಬಳಿ, ಹುಂಡಿಮಾಳ ಗ್ರಾಮದ ಬಿಲ್ಡರ್ಸ್ ಬಡಾವಣೆ, ಮನೆ ನಂ. 73, ಚಂದ್ರಶೇಖರ್ ಬಿನ್ ಶಿವಣ್ಣೇಗೌಡ ಇವರಿಗೆ ಸೇರಿದ ವಾಸದ ಮನೆಯಲ್ಲಿ ಅಕ್ರಮವಾಗಿ 40 ಲೀ. ಸಂಸ್ಕರಿಸಿದ ಮದ್ಯಸಾರ ಹಾಗೂ 0.720 ಲೀ. ಒರಿಜಿನಲ್ ಡಿಲಕ್ಸ್ ವಿಸ್ಕಿ ಹೆಸರಿನ ನಕಲಿ ಮದ್ಯವನ್ನು ಹೊಂದಿದ್ದುದು ಕಂಡುಬಂದಿರುತ್ತದೆ. ಈ ಪ್ರಾಧಿಕಾರದಿಂದ ದಿನಾಂಕ : 23.03.09ರಂದು ನೀಡಲಾದ ಕಾರಣ ಕೇಳುವ ನೋಟೀಸಿಗೆ ಯಾವುದೇ ಪ್ರತಿಕ್ರಿಯೆಯನ್ನು ನೀಡಿರುವುದಿಲ್ಲ. ಅಲ್ಲದೇ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಇದೂವರೆವಿಗೂ ಯಾವುದೇ ಪ್ರಯತ್ನ ನಡೆದಿರುವುದಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32, 34ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿ / ಹೊಣೆಗಾರಿಕೆಯನ್ನು ಇದೂವರೆವಿಗೆ ಪ್ರಾಧಿಕಾರದ ಮುಂದೆ ನಿರೂಪಿಸಿರುವುದಿಲ್ಲ. ಆದ ಕಾರಣ ಈ ಕೃತ್ಯ ತನ್ನ ತಿಳುವಳಿಕೆಯಲ್ಲಿಯೇ ನಡೆದಿದೆ ಎಂಬುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 7 ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನ ತನ್ನದೆಂದಾಗಲೀ ಈ ಬಗ್ಗೆ ತಾನು ವಿಚಾರಣೆಯನ್ನು ನಡೆಸುತ್ತೇನೆಂದಾಗಲೀ ಯಾರೂ ಇಂದಿನವರೆಗೂ ಖುದ್ದಾಗಿ ಆಗಲಿ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನದ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನ ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ ಅಥವಾ ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲವಾದುದರಿಂದ ಸದರಿ ವಾಹನವನ್ನು ಇನ್ನೂ ಹಾಗೆಯೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/127/2008–09, ದಿನಾಂಕ:28ನೇ ಏಪ್ರಿಲ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43 (A)(2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು, ಹುಣಸೂರು ವಲಯ ಇವರ

ಪ್ರಮಾವ ಸಂಖ್ಯೆ : 03/08-09, ದಿನಾಂಕ:12-09-2008ರಂದು ವಶಪಡಿಸಿಕೊಂಡ ಸಂ: KA-45/ E-5063 ನೋಂದಣಿ ಬಜಾಜ್ ಸಿ.ಟಿ–100 ವಾಹನವನ್ನು ಹಾಗೂ 40 ಲೀ. ಸಂಸ್ಕರಿಸಿದ ಮದ್ಯಸಾರ ಮತ್ತು 0.720 ಲೀ. ನಕಲಿ ಮದ್ಯವನ್ನು (ಮಾದರಿಯನ್ನು ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿಯ ಏಪ್ರಿಲ್ ತಿಂಗಳ 23ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಲಾಗಿದೆ.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಎ.ಎಸ್.ವಿಶ್ವರೂಪ್**

ಪಿ.ಆರ್.486 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ

ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

## ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್/541/07–08, ದಿನಾಂಕ:28ನೇ ಏಪ್ರಿಲ್, 2009**

**ಉಪಸ್ಥಿತರು:** ಎ.ಎಸ್.ವಿಶ್ವರೂಪ

ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಫಿರ್ಯಾದುದಾರರು** | **ಪ್ರತಿವಾದಿ/ ಆರೋಪಿ** |
|---|---|
| ಆರಕ್ಷಕ ಉಪ ನಿರೀಕ್ಷಕರು, ಬನ್ನೂರು ಠಾಣೆ, | ಕುಮಾರ ಬಿನ್ ದೊಳ್ಳಯ್ಯ, |
| ಟಿ. ನರಸೀಪುರ ತಾ|| | ಮಲಿಯೂರು ಗ್ರಾಮ, ತಿ. ನರಸೀಪುರ ತಾ|| |

**ಪ್ರಕರಣದ ಮುಖ್ಯಾಂಶಗಳು :**

ದಿನಾಂಕ:16-06-2008ರಂದು ಬೆಳಿಗ್ಗೆ 7-30 ಗಂಟೆಯ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಬನ್ನೂರು ಪೋಲೀಸ್ ಠಾಣೆ, ಟಿ.ನರಸೀಪುರ ತಾಲ್ಲೂಕು – ಇವರು ಟಿ.ನರಸೀಪುರ ತಾಲ್ಲೂಕು, ಬನ್ನೂರು ಕಡೆಯಿಂದ ಸೋಮನಾಥಪುರಕ್ಕೆ ಹೀರೋ ಹೋಂಡಾ ಸಂಖ್ಯೆ : KA–29/E-3196 ವಾಹನದಲ್ಲಿ ಅಕ್ರಮವಾಗಿ 8.280 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಅಪರಾಧಕ್ಕಾಗಿ ವಾಹನ ಮತ್ತು ಮಾದಕ ದ್ರವ್ಯಗಳನ್ನು ವಶಪಡಿಸಿಕೊಂಡು, ಪ್ರ.ಮಾ.ವ ಸಂ. 86/2008 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 32, 34ರನ್ವಯ ಮೊಕದ್ದಮೆ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ, ಜಪ್ತುಗೊಳಿಸಲಾದ ವಾಹನ ಮತ್ತು ಮಾದಕ ದ್ರವ್ಯಗಳನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಪ್ರಾಧಿಕಾರದ ಅನುಮತಿಯನ್ನು ಕೋರಿರುತ್ತಾರೆ. ಅಂತೆಯೇ ದಿನಾಂಕ:18.06.2008ರಂದು ಟಿ.ನರಸೀಪುರ ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಾಹನದ ಮಾಲೀಕತ್ವದ ವಿವರವನ್ನು ಕೋರಿ, ಬಾಗಲಕೋಟೆ ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ : 14-07-08ರಂದು ಈ ಪ್ರಾಧಿಕಾರದಿಂದ ಪತ್ರ ವ್ಯವಹಾರ ನಡೆಸಲಾಗಿದ್ದು, ಇದಕ್ಕೆ ಯಾವುದೇ ಪ್ರತಿಕ್ರಿಯೆ ದೊರೆಯದ ಕಾರಣ ದಿನಾಂಕ : 05.11.2008 ರಂದು ನೆನಪೋಲೆ ಪತ್ರವನ್ನು ಬರೆಯಲಾಗಿರುತ್ತದೆ. ಸದರಿ ವಾಹನದ ಬಿ ವಹಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿರುತ್ತಾರೆ. ಇದನ್ನು ಪರಿಶೀಲಿಸಲಾಗಿ, ಫಕೀರುಸಾ ಟಿ.ಉಗ್ಗಿ ಬಿನ್ ತಿಪ್ಪನ್ನಸಾ, ಸಂ. 05, ಇಟ್ಕಲ್ ಪೋಸ್ಟ್, ಹುನಗುಂದ ತಾಲ್ಲೂಕು ಇವರ ಒಡೆತನದಲ್ಲಿರುವುದು ದೃಢಪಟ್ಟಿರುತ್ತದೆ. ಸದರಿಯವರಿಗೆ ವಾಹನ ಮತ್ತು ಅಬಕಾರಿ ವಸ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ದಿನಾಂಕ:12.12.2008ರಂದು ಕಲಂ 43(ಬಿ)ರಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ನೋಟೀಸ್ ಮಾಲೀಕರಿಗೆ ಜಾರಿಯಾಗಿ ಸ್ವೀಕೃತಿಯು ಈ ಪ್ರಾಧಿಕಾರಕ್ಕೆ ದಿನಾಂಕ:15.01.2009ರಂದು ಸ್ವೀಕೃತಿಯಾಗಿರುತ್ತದೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:16-06-2008ರಂದು ಟಿ.ನರಸೀಪುರ ತಾಲ್ಲೂಕು, ಬನ್ನೂರು ಕಡೆಯಿಂದ ಸೋಮನಾಥಪುರಕ್ಕೆ ಅಕ್ರಮವಾಗಿ 8.280 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಪ್ರಾಧಿಕಾರದಿಂದ ದಿನಾಂಕ:12.12.2008ರಂದು ನೀಡಲಾದ ಕಾರಣ ಕೇಳುವ ನೋಟೀಸಿಗೆ ಇದೂವರೆವಿಗೂ ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ. ಅಲ್ಲದೇ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಇದೂವರೆವಿಗೂ ಯಾವುದೇ ಪ್ರಯತ್ನ ನಡೆದಿರುವುದಿಲ್ಲ ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32, 34ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿ / ಹೊಣೆಗಾರಿಕೆಯನ್ನು ಇದೂವರೆವಿಗೆ ಪ್ರಾಧಿಕಾರದ ಮುಂದೆ ನಿರೂಪಿಸಿರುವುದಿಲ್ಲ. ಆದ ಕಾರಣ ಈ ಕೃತ್ಯ ತನ್ನ ತಿಳುವಳಿಕೆಯಲ್ಲಿಯೇ ನಡೆದಿದೆ ಎಂಬುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 9 ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನ ತನ್ನದೆಂದಾಗಲೀ ಈ ಬಗ್ಗೆ ತಾನು ವಿಚಾರಣೆಯನ್ನು ನಡೆಸುತ್ತೇನೆಂದಾಗಲೀ ಯಾರೂ ಇಂದಿನವರೆಗೂ ಖುದ್ದಾಗಿ ಆಗಲಿ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನದ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನ ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ ಅಥವಾ ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲವಾದುದರಿಂದ ಸದರಿ ವಾಹನವನ್ನು ಇನ್ನೂ ಹಾಗೆಯೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/541/2008–09, ದಿನಾಂಕ:28ನೇ ಏಪ್ರಿಲ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43 (A)(2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಬನ್ನೂರು ಪೋಲೀಸ್ ಠಾಣೆ, ಟಿ.ನರಸೀಪುರ ತಾ॥ ಇವರ ಪ್ರಮಾವ ಸಂ: 86/08, ದಿನಾಂಕ:16-06-08ರಂದು ವಶಪಡಿಸಿಕೊಂಡ ಸಂ: KA-29/E-3196 ನೋಂದಣಿ ಹೀರೋ ಹೋಂಡಾ ವಾಹನ ಮತ್ತು 8.280 ಲೀ. ಮದ್ಯವನ್ನು (ಮಾದರಿಯನ್ನು ಹೊರತುಪಡಿಸಿ), ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿಯ ಏಪ್ರಿಲ್ ತಿಂಗಳ 28ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಲಾಗಿದೆ.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಎ.ಎಸ್.ವಿಶ್ವರೂಪ್**

ಪಿ.ಆರ್.487

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

## ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್/257/07–08, ದಿನಾಂಕ:28ನೇ ಏಪ್ರಿಲ್, 2009**

**ಉಪಸ್ಥಿತರು:** ಎ.ಎಸ್.ವಿಶ್ವರೂಪ

ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಫಿರ್ಯಾದುದಾರರು** | **ಪ್ರತಿವಾದಿ/ ಆರೋಪಿ** |
|---|---|
| ಅಬಕಾರಿ ಉಪ ನಿರೀಕ್ಷಕರು–2,<br>(ಜಾರಿ ಮತ್ತು ತನಿಖೆ), ನಂಜನಗೂಡು ತಾ॥ | ಸುಬೇರ್ ಬಿನ್ ಮಹಮದ್, ಮತ್ತು ಇತರರು. |

**ಪ್ರಕರಣದ ಮುಖ್ಯಾಂಶಗಳು :**

ದಿನಾಂಕ:05-12-2007ರಂದು ರಾತ್ರಿ 7-30 ಗಂಟೆಯ ಸಮಯದಲ್ಲಿ ನಂಜನಗೂಡು ತಾಲ್ಲೂಕು, ಜಾರಿ ಮತ್ತು ತನಿಖೆಯ ಅಬಕಾರಿ ಉಪ ನಿರೀಕ್ಷಕರು–2 ಇವರು ನಂಜನಗೂಡು ತಾಲ್ಲೂಕು, ಗುಂಡ್ಲುಪೇಟೆ ಮುಖ್ಯ ರಸ್ತೆಯಲ್ಲಿರುವ ಕಳಲೆ ಗೇಟ್ ಬಳಿ ಅಕ್ರಮವಾಗಿ 35 ಲೀ. ನಕಲಿ ಮದ್ಯದ ಮಿಶ್ರಣವನ್ನು ಹೀರೋ ಹೋಂಡಾ ಪ್ಯಾಷನ್ ಸಂಖ್ಯೆ : KA–04/ED-1465 ವಾಹನದಲ್ಲಿ ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಅಪರಾಧಕ್ಕಾಗಿ ವಾಹನ ಮತ್ತು ಮಾದಕ ದ್ರವ್ಯಗಳನ್ನು ವಶಪಡಿಸಿಕೊಂಡು, ಪ್ರ.ಮಾ.ವ ಸಂ. 8/07-08ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13, 14ರ ರೀತ್ಯಾ ಅಪರಾಧವಾಗಿದ್ದು, ಕಲಂ 32, 33, 34, 38(A) ಮತ್ತು 43ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಆರೋಪಿಗಳಾದ ಸುಬೇರ್ ಬಿನ್ ಮಹಮದ್, ಟಿ.ಎಂ.ಅಷ್ರಫ್ ಬಿನ್ ಟಿ.ಎನ್. ಮೂಸೇ ಇವರನ್ನು ದಸ್ತಗಿರಿ ಮಾಡಿರುವುದಾಗಿ, ಮೊಕದ್ದಮೆ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಯಾರಿಂದ ವಾಹನವನ್ನು ವಶಪಡಿಸಿಕೊಳ್ಳಲಾಗಿದೆಯೋ ಅವರಿಗೆ ಈ ಪ್ರಾಧಿಕಾರದಿಂದ ದಿನಾಂಕ : 31.11.2007ರಂದು ಕಲಂ 43(ಬಿ)ರ ಅಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ಟಿ.ಎಂ.ಅಷ್ರಫ್

ಇವರಿಗೆ ಜಾರಿಯಾಗಿ, ಸ್ವೀಕೃತಿ ಈ ಪ್ರಾಧಿಕಾರಕ್ಕೆ ಸ್ವೀಕೃತಿಯಾಗಿರುತ್ತದೆ. ಮತ್ತೊಬ್ಬ ಆರೋಪಿಯಾದ ಸುಬೇರ್ ಬಿನ್ ಮಹಮದ್ ಇವರ ವಿಳಾಸ ಪತ್ತೆಯಾಗಿರುವುದಿಲ್ಲವೆಂದು ಈ ಪ್ರಾಧಿಕಾರಕ್ಕೆ ಹಿಂತಿರುಗಿಸಿರುತ್ತಾರೆ.

ವಾಹನದ ಮಾಲೀಕತ್ವದ ವಿವರವನ್ನು ಕೋರಿ, ಬೆಂಗಳೂರಿನ ಯಶ್ವಂತಪುರ ಉತ್ತರ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ : 31-11-07ರಂದು ಈ ಪ್ರಾಧಿಕಾರದಿಂದ ಪತ್ರ ವ್ಯವಹಾರ ನಡೆಸಲಾಗಿದ್ದು, ಇದಕ್ಕೆ ಯಾವುದೇ ಪ್ರತಿಕ್ರಿಯೆ ದೊರೆಯದ ಕಾರಣ ದಿನಾಂಕ : 23.09.2008ರಂದು ನೆನಪೋಲೆ ಪತ್ರವನ್ನು ಬರೆಯಲಾಗಿರುತ್ತದೆ. ಈ ಪ್ರಕರಣದಲ್ಲಿ ಜಪ್ತುಗೊಳಿಸಲಾದ 35 ಲೀ. ಸಂಸ್ಕರಿಸಿದ ಮದ್ಯವನ್ನು ದಿನಾಂಕ : 28.01.2008ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ನಂಜನಗೂಡು ತಾಲ್ಲೂಕು ಜಾರಿ ಮತ್ತು ತನಿಖೆಯ ಅಬಕಾರಿ ಉಪ ನಿರೀಕ್ಷಕರು ಜಪ್ತುಗೊಳಿಸಲಾದ ವಾಹನ ಸಂ. KA–04/ED-1465 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ. ಈ ಪ್ರಕರಣದಲ್ಲಿ ಮಾದರಿ ತೆಗೆಯಲಾದ ಮಾದಕ ದ್ರವ್ಯವನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ ವರದಿ ಪಡೆಯಲಾಗಿ, ತಮ್ಮ ವರದಿ ದಿನಾಂಕ: 11.02.2008ರಲ್ಲಿ ಆಲ್ಕೋಹಾಲ್ ಅಂಶ ಪತ್ತೆಯಾಗಿದ್ದು, ಜೋರು ಶೇಕಡಾ 35.72 V/v ಇರುವುದಾಗಿ ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಂಗಳೂರು ಉತ್ತರ ಇವರು ವಾಹನ ಮಾಲೀಕತ್ವವುಳ್ಳ ಬಿ ವಹಿಯ ಪ್ರತಿಯನ್ನು ಕಳುಹಿಸಿರುತ್ತಾರೆ. ಸದರಿ ಬಿ ವಹಿಯಂತೆ ಪಿ.ಪಿ. ನವೀನ್ ಕುಮಾರ್ ಬಿನ್ ಡಾ॥ ಪುರುಷೋತ್ತಮ ರೆಡ್ಡಿ, ಸಂ. 5, ತಿರುಮೇನಹಳ್ಳಿ, ಜಕ್ಕೂರು ಅಂಚೆ, ಬೆಂಗಳೂರು ಉತ್ತರ ಇವರ ಒಡೆತನದಲ್ಲಿದ್ದು, ವಾಹನ ಮತ್ತು ಅಬಕಾರಿ ವಸ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ)ರಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ನೋಟೀಸ್ ಮಾಲೀಕರಿಗೆ ಜಾರಿಯಾಗಿ ಸ್ವೀಕೃತಿಯು ಈ ಪ್ರಾಧಿಕಾರಕ್ಕೆ ದಿನಾಂಕ : 14.11.2008ರಂದು ಸ್ವೀಕೃತಿಯಾಗಿರುತ್ತದೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:05-12-2007ರಂದು ನಂಜನಗೂಡು ತಾಲ್ಲೂಕು, ಗುಂಡ್ಲುಪೇಟೆ ಮುಖ್ಯ ರಸ್ತೆಯಲ್ಲಿರುವ ಕಳಲೆ ಗೇಟ್ ಬಳಿ ಅಕ್ರಮವಾಗಿ 35 ಲೀ. ನಕಲಿ ಮದ್ಯದ ಮಿಶ್ರಣವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಪ್ರಾಧಿಕಾರದಿಂದ ದಿನಾಂಕ:21.10.08ರಂದು ನೀಡಲಾದ ಕಾರಣ ಕೇಳುವ ನೋಟೀಸಿಗೆ ಇದೂವರೆವಿಗೂ ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ. ಅಲ್ಲದೇ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಇದೂವರೆವಿಗೂ ಯಾವುದೇ ಪ್ರಯತ್ನ ನಡೆದಿರುವುದಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32, 34ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿ / ಹೊಣೆಗಾರಿಕೆಯನ್ನು ಇದೂವರೆವಿಗೆ ಪ್ರಾಧಿಕಾರದ ಮುಂದೆ ನಿರೂಪಿಸಿರುವುದಿಲ್ಲ. ಆದ ಕಾರಣ ಈ ಕೃತ್ಯ ತನ್ನ ತಿಳುವಳಿಕೆಯಲ್ಲಿಯೇ ನಡೆದಿದೆ ಎಂಬುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 15 ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನ ತನ್ನದೆಂದಾಗಲೀ ಈ ಬಗ್ಗೆ ತಾನು ವಿಚಾರಣೆಯನ್ನು ನಡೆಸುತ್ತೇನೆಂದಾಗಲೀ ಯಾರೂ ಇಂದಿನವರೆಗೂ ಖುದ್ದಾಗಿ ಆಗಲಿ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನದ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನ ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ ಅಥವಾ ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲವಾದುದರಿಂದ ಸದರಿ ವಾಹನವನ್ನು ಇನ್ನೂ ಹಾಗೆಯೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/257/2008–09, ದಿನಾಂಕ:28ನೇ ಏಪ್ರಿಲ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43 (A)(2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು–2, (ಜಾರಿ ಮತ್ತು ತನಿಖೆ), ನಂಜನಗೂಡು ತಾಲ್ಲೂಕು ಇವರ ಪ್ರಮಾವ ಸಂಖ್ಯೆ : 08/07-08, ದಿನಾಂಕ : 05-12-2007ರಂದು ವಶಪಡಿಸಿಕೊಂಡ ಸಂ: KA–04/ED-1465 ನೋಂದಣಿ ಹೀರೋ ಹೋಂಡಾ ಪ್ಯಾಷನ್ ವಾಹನವನ್ನು (35 ಲೀ. ಬ್ಲೆಂಡ್ ಮದ್ಯವನ್ನು ಮಾದರಿಯನ್ನು ಹೊರತುಪಡಿಸಿ ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿಯ ಏಪ್ರಿಲ್ ತಿಂಗಳ 28ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಲಾಗಿದೆ.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಎ.ಎಸ್.ವಿಶ್ವರೂಪ್**

ಪಿ.ಆರ್.488

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

## ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್/55/08–09, ದಿನಾಂಕ:28ನೇ ಏಪ್ರಿಲ್, 2009**

**ಉಪಸ್ಥಿತರು:** ಎ.ಎಸ್.ವಿಶ್ವರೂಪ

ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಫಿರ್ಯಾದುದಾರರು** | **ಪ್ರತಿವಾದಿ/ ಆರೋಪಿ** |
|---|---|
| ಅಬಕಾರಿ ಉಪ ನಿರೀಕ್ಷಕರು–2, ನಂಜನಗೂಡು ವಲಯ. | ಬಿ.ಎಂ.ಕುಮಾರ್ ಬಿನ್ ಮಾದೇಗೌಡ, ಹುಲ್ಲಳ್ಳಿ, ನಂಜನಗೂಡು ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು :**

ದಿನಾಂಕ : 23-08-2008ರಂದು ಮಧ್ಯಾಹ್ನ 3-00 ಗಂಟೆಯ ಸಮಯದಲ್ಲಿ ನಂಜನಗೂಡು ವಲಯದ ಅಬಕಾರಿ ಉಪ ನಿರೀಕ್ಷಕರು–2 ಇವರು ನಂಜನಗೂಡು ತಾಲ್ಲೂಕು, ಹುಲ್ಲಹಳ್ಳಿ ಹೋಬಳಿ, ಹರದನಹಳ್ಳಿ ಬಸಾಪುರ ಮಾರ್ಗ ಮಧ್ಯದಲ್ಲಿ ಬರುವ ಹುಚ್ಚಗಣಿ ಗ್ರಾಮದ ಮಹದೇವಮ್ಮನ ದೇವಸ್ಥಾನದ ಹತ್ತಿರ, ಅಕ್ರಮವಾಗಿ 8.640 ಲೀ. ಮದ್ಯವನ್ನು ಟಿವಿಎಸ್ ಎಕ್ಸೆಲ್ ಸೂಪರ್ ಸಂಖ್ಯೆ : KA-09/Y-8568 ವಾಹನದಲ್ಲಿ ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಅಪರಾಧಕ್ಕಾಗಿ ವಾಹನ ಮತ್ತು ಮಾದಕ ದ್ರವ್ಯಗಳನ್ನು ವಶಪಡಿಸಿಕೊಂಡು, ಪ್ರ.ಮಾ.ವ ಸಂ. 04/08-09 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13(1),(A), 14 ರ ರೀತ್ಯಾ ಅಪರಾಧವಾಗಿದ್ದು, ಕಲಂ 32, 38(A), 43ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಆರೋಪಿ ಬಿ.ಎಂ.ಕುಮಾರ್ ಬಿನ್ ಮಾದೇಗೌಡ ಇವರನ್ನು ದಸ್ತಗಿರಿ ಮಾಡಿರುವುದಾಗಿ, ಮೊಕದ್ದಮೆಯನ್ನು ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನದ ಮಾಲೀಕತ್ವದ ವಿವರವನ್ನು ಕೋರಿ, ಮೈಸೂರಿನ ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ : 27-11-08ರಂದು ಈ ಪ್ರಾಧಿಕಾರದಿಂದ ಪತ್ರ ವ್ಯವಹಾರ ನಡೆಸಲಾಗಿರುತ್ತದೆ. ಸದರಿ ಬಿ ವಹಿಯಂತೆ ಸಂ. KA–09/Y-8568 ವಾಹನದ ಮಾಲೀಕರಾದ ಕೆ.ಎಸ್. ವೆಂಕಟೇಶ್ ಬಿನ್ ಸಣ್ಣಯ್ಯ, ಸಂ. 25/1, ಮುತ್ತಿನ ಮಾಲಸೋಗೆ, ಪಿರಿಯಾಪಟ್ಟಣ ತಾಲ್ಲೂಕು ಇವರಿಗೆ ವಾಹನ ಮತ್ತು ಅಬಕಾರಿ ವಸ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ)ರಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ನೋಟೀಸ್ ದಿನಾಂಕ:09.01.2009ರಂದು ಮಾಲೀಕರಿಗೆ ಜಾರಿಯಾಗಿ ಸ್ವೀಕೃತಿಯು ಈ ಪ್ರಾಧಿಕಾರಕ್ಕೆ ದಿನಾಂಕ:19.01.2009ರಂದು ಸ್ವೀಕೃತಿಯಾಗಿರುತ್ತದೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:23-08-2008ರಂದು ನಂಜನಗೂಡು ತಾಲ್ಲೂಕು, ಹುಲ್ಲಹಳ್ಳಿ ಹೋಬಳಿ, ಹರದನಹಳ್ಳಿ ಬಸಾಪುರ ಮಾರ್ಗ ಮಧ್ಯದಲ್ಲಿ ಬರುವ ಹುಚ್ಚಗಣಿ ಗ್ರಾಮದ ಮಹದೇವಮ್ಮನ ದೇವಸ್ಥಾನದ ಹತ್ತಿರ, ಅಕ್ರಮವಾಗಿ 8.640 ಲೀ. ಮದ್ಯವನ್ನು ಹೊಂದಿದ್ದುದು ಕಂಡುಬಂದಿರುತ್ತದೆ. ಈ ಪ್ರಾಧಿಕಾರದಿಂದ ದಿನಾಂಕ: 22.12.08 ರಂದು ನೀಡಲಾದ ಕಾರಣ ಕೇಳುವ ನೋಟೀಸಿಗೆ ಪ್ರತಿಕ್ರಿಯಿಸಿ, ಸದರಿ ವಾಹನವನ್ನು 2004ರಲ್ಲಿ ಶುದ್ಧ ಕ್ರಯಕ್ಕೆ ಮಾರಾಟ ಮಾಡಿರುತ್ತೇನೆ. ಪ್ರಸ್ತುತ ಆ ವಾಹನಕ್ಕು ನನಗೂ ಯಾವುದೇ ಸಂಬಂಧವಿರುವುದಿಲ್ಲವೆಂದು ಹಾಗೂ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ನನ್ನ ಯಾವುದೇ ಆಕ್ಷೇಪಣೆ ಇರುವುದಿಲ್ಲವೆಂದು ಲಿಖಿತ ಮೂಲಕ ತಿಳಿಸಿರುತ್ತಾರೆ. ಅಲ್ಲದೇ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಇದೂವರೆವಿಗೂ ಯಾವುದೇ ಪ್ರಯತ್ನ ನಡೆದಿರುವುದಿಲ್ಲ ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32, 34ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿ/ಹೊಣೆಗಾರಿಕೆಯನ್ನು ಇದೂವರೆವಿಗೆ ಪ್ರಾಧಿಕಾರದ ಮುಂದೆ ನಿರೂಪಿಸಿರುವುದಿಲ್ಲ. ಆದ ಕಾರಣ ಈ ಕೃತ್ಯ ತನ್ನ ತಿಳುವಳಿಕೆಯಲ್ಲಿಯೇ ನಡೆದಿದೆ ಎಂಬುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುತ್ತದೆ.

ಈ ಪ್ರಕರಣದಲ್ಲಿ ಮಾದರಿ ತೆಗೆಯಲಾದ ಮಾದಕ ದ್ರವ್ಯಗಳನ್ನು ಬೆಂಗಳೂರಿನ ಮಲ್ಲೇಶ್ವರಂನಲ್ಲಿರುವ ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ, ವರದಿ ಪಡೆಯಲಾಗಿ, ತಮ್ಮ ವರದಿ ದಿನಾಂಕ:23.09.2008ರಲ್ಲಿ "ಈಥೈಲ್ ಆಲ್ಕೋಹಾಲ್" ಕಂಡುಬಂದಿದ್ದು, ಅವು ಭಾರತ ಬ್ಯೂರೋದ ಮಾನಕಕ್ಕೆ ಅನುಗುಣವಾಗಿಲ್ಲದಿರುವುದರಿಂದ ಇವು ನಕಲಿ ಮದ್ಯವಾಗಿರುತ್ತವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 8 ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನ ತನ್ನದೆಂದಾಗಲೀ ಈ ಬಗ್ಗೆ ತಾನು ವಿಚಾರಣೆಯನ್ನು ನಡೆಸುತ್ತೇನೆಂದಾಗಲೀ ಯಾರೂ ಇಂದಿನವರೆಗೂ ಖುದ್ದಾಗಿ ಆಗಲಿ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನದ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನ ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ ಅಥವಾ ಏಜೆಂಟರ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲವಾದುದರಿಂದ ಸದರಿ ವಾಹನವನ್ನು ಇನ್ನೂ ಹಾಗೆಯೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/55/2008–09, ದಿನಾಂಕ:28ನೇ ಏಪ್ರಿಲ್, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43 (A)(2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ಉಪ ನಿರೀಕ್ಷಕರು–2, ನಂಜನಗೂಡು ವಲಯ ಇವರ ಪ್ರಮಾವ ಸಂಖ್ಯೆ : 04/08-09, ದಿನಾಂಕ:23-08-2008ರಂದು ವಶಪಡಿಸಿಕೊಂಡ ಸಂ:KA-09/Y-8568 ನೋಂದಣಿ ಟಿ.ವಿ.ಎಸ್ ಎಕ್ಸೆಲ್ ವಾಹನವನ್ನು ಹಾಗೂ 8.640 ಲೀ. ಮದ್ಯವನ್ನು (ಮಾದರಿಯನ್ನು ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿಯ ಏಪ್ರಿಲ್ ತಿಂಗಳ 28ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಲಾಗಿದೆ.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಎ.ಎಸ್.ವಿಶ್ವರೂಪ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.489

**ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:28/2008–09, ದಿನಾಂಕ:28ನೇ ಮೇ, 2009**

**ಉಪಸ್ಥಿತರು:** ಡಾ।। ವೈ. ಮಂಜುನಾಥ್
ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಫಿರ್ಯಾದುದಾರರು** | | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ಉಪ ನಿರೀಕ್ಷಕರು<br>ಟಿ.ನರಸೀಪುರ ವಲಯ, ಟಿ.ನರಸೀಪುರ | **ವಿರುದ್ಧ** | 1) ಆರೋಪಿಗಳು ಪರಾರಿಯಾಗಿರುತ್ತಾರೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:14–07–2008 ರಂದು ರಾತ್ರಿ 9:30 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು ನಂ.2, ಟಿ.ನರಸೀಪುರ ವಲಯ, ಇವರು ಟಿ.ನರಸೀಪುರ ತಾಲ್ಲೂಕು, ಬನ್ನೂರು–ಯಾಚೇನಹಳ್ಳಿ ರಸ್ತೆ, ಯಾಚೇನಹಳ್ಳಿ ಗ್ರಾಮದ ವಿದ್ಯುತ್ ಕಂಬದ ಬಳಿ, ಅಕ್ರಮವಾಗಿ 17.280 ಲೀ. ನಕಲಿ ಮದ್ಯವನ್ನು ನೋಂದಣಿ ಸಂಖ್ಯೆಯ ಇಲ್ಲದ ಸುಜುಕಿ ಜೀಸ್ (ಚಾಸಿಸ್ ನಂ.MB8NF4BCB-88149876 ಇಂಜಿನ್ ಸಂಖ್ಯೆ: 479–223344) ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ನಕಲಿ ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ: 02/2008–09 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14ರ ರೀತ್ಯಾ ಅಪರಾಧವಾಗಿದ್ದು, ಕಲಂ 32, 34, 38(ಎ) ರೀತ್ಯಾ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಆರೋಪಿಗಳು ತಲೆ ಮರೆಸಿಕೊಂಡಿರುವುದಾಗಿ ನಮೂದಿಸಿ, ಪ್ರಥಮ ಮಾಹಿತಿ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ : 14.07.2008ರಂದು ಟಿ.ನರಸೀಪುರ ತಾಲ್ಲೂಕು, ಬನ್ನೂರು–ಯಾಚೇನಹಳ್ಳಿ ರಸ್ತೆ, ಯಾಚೇನಹಳ್ಳಿ ಗ್ರಾಮದ ವಿದ್ಯುತ್ ಕಂಬದ ಬಳಿ, ಅಕ್ರಮವಾಗಿ 17.280 ಲೀ. ನಕಲಿ ಮದ್ಯವನ್ನು ನೋಂದಣಿ ಸಂಖ್ಯೆಯ ಇಲ್ಲದ ಸುಜುಕಿ ಜೀಸ್ (ಚಾಸಿಸ್ ನಂ.MB8NF4BCB-88149876 ಇಂಜಿನ್ ಸಂಖ್ಯೆ: 479–223344) ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿಗಳು ತಲೆ ಮರೆಸಿಕೊಂಡಿರುತ್ತಾನೆ. ಈ ವಾಹನಕ್ಕೆ ಸಂಬಂಧಪಟ್ಟ ಆರೋಪಿಯಾಗಲೀ / ವಾಹನ ಮಾಲೀಕರಾಗಲೀ ಈ ಪ್ರಾಧಿಕಾರದ

ಮುಂದೆ ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಪ್ರಥಮ ಮಾಹಿತಿ ವರದಿಯಲ್ಲಿ ಆರೋಪಿಗಳು ತಲೆ ಮರೆಸಿಕೊಂಡಿರುವುದಾಗಿ ಮೊಕದ್ದಮೆಯನ್ನು ದಾಖಲಿಸಿ, ಸುಮಾರು (10) ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಇಂತಹ ಪ್ರಕರಣಗಳಲ್ಲಿ ಕಲಂ 43(ಸಿ)ರ ಅಡಿಯಲ್ಲಿ ಮೊಕದ್ದಮೆ ದಾಖಲಾದ ದಿನದಿಂದ ಒಂದು ತಿಂಗಳೊಳಗಾಗಿ ವಾಹನ ಮತ್ತು ಮಾದಕ ದ್ರವ್ಯಗಳು ತನ್ನದೆಂದು ಮಾಲೀಕತ್ವ ನಿರೂಪಿಸಲು ಮುಂದೆ ಬಾರದಿದ್ದ ಪಕ್ಷದಲ್ಲಿ ಅಂತಹ ವಾಹನ ಮತ್ತು ಮಾದಕ ದ್ರವ್ಯಗಳನ್ನು ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಅಕ್ರಮವಾಗಿ ನಕಲಿ ಮದ್ಯವನ್ನು ತಯಾರಿಸಿ, ಮಾರಾಟ ಮತ್ತು ಸಾಗಾಣಿಕೆಯಂತಹ ವ್ಯವಹಾರದಲ್ಲಿ ತೊಡಗಿ, ಇಂತಹ ಮಾದಕ ದ್ರವ್ಯಗಳನ್ನು ಮುಗ್ಧ ಜನರು ಸೇವಿಸಿ, ತಮ್ಮ ಪ್ರಾಣ ಕಳೆದುಕೊಳ್ಳುವುದಲ್ಲದೇ, ಸಮಾಜದ ಮೇಲೆ ದುಷ್ಪರಿಣಾಮ ಉಂಟಾಗುವ ಸಾಧ್ಯತೆಗಳನ್ನು ತಳ್ಳಿಹಾಕುವಂತಿಲ್ಲ. ಇದು ಅಲ್ಲದೇ ಸರ್ಕಾರದ ಬೊಕ್ಕಸಕ್ಕೆ ನಷ್ಟವುಂಟು ಮಾಡುತ್ತಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (10) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನ ವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/28/2008–09, ದಿನಾಂಕ:28ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ಉಪ ನಿರೀಕ್ಷಕರು, ಟಿ.ನರಸೀಪುರ ವಲಯ, ಟಿ.ನರಸೀಪುರ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 02/2008–09, ದಿ: 14–07–08 ರಂದು ವಶಪಡಿಸಿಕೊಂಡ ನೋಂದಣಿ ಸಂಖ್ಯೆಯ ಇಲ್ಲದ ಸುಜುಕಿ ಜೀಸ್ (ಚಾಸಿಸ್ ನಂ.MB8NF4BCB-88149876 ಇಂಜಿನ್ ಸಂಖ್ಯೆ: 479–223344) ವಾಹನವನ್ನು ಮತ್ತು 17.280 ಲೀ. ನಕಲಿ ಮದ್ಯವನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಮೇ ತಿಂಗಳ 28ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ|| ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.525

## ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್:251/2008–09, ದಿನಾಂಕ:28ನೇ ಮೇ, 2009**

**ಉಪಸ್ಥಿತರು:** ಡಾ|| ವೈ. ಮಂಜುನಾಥ್
ಡೆಪ್ಯುಟಿ ಕಮಿಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಫಿರ್ಯಾದುದಾರರು** | | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ಉಪ ನಿರೀಕ್ಷಕರು,<br>ಉಪ ವಿಭಾಗ, ಮೈಸೂರು. | **ವಿರುದ್ಧ** | 1) ಎಂ.ರಾಜು ಮತ್ತು ಇತರರು |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 27–11–2008ರಂದು ಮಧ್ಯಾಹ್ನ 3:30 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಉಪ ವಿಭಾಗ, ಮೈಸೂರು ಇವರು ಮೈಸೂರು ತಾಲ್ಲೂಕು, ಹೂಟಗಳ್ಳಿ ಎಸ್.ಆರ್. ಎಸ್ ಕಾಲೋನಿ, ವಿಶ್ವ ಕರ್ಮ ಸಮಿತಿ ಎಂದು ನಾಮಾಂಕಿತ ಹೊಂದಿರುವ ಫಲಕದ ಪಕ್ಕದಲ್ಲಿರುವ ಎಂ. ರಾಜು ಬಿನ್ ಮಹದೇವು ಇವರ ವಾಸದ ಮನೆಯಲ್ಲಿ 112.320 ಲೀ. ನಕಲಿ ಮದ್ಯ, 105 ಲೀ. ಸಂಸ್ಕರಿಸಿದ ಮದ್ಯ (ಬ್ಲೆಂಡ್) ಖಾಲಿ ಸೀಸೆಗಳು, ಲೇಬಲ್‌ಗಳು, ಕಾರ್ಕ್‌ಗಳು, ಭದ್ರತಾ ಅಂಟು ಚೀಟಿಗಳು ಮತ್ತು ವೆನಿಲಾ ಎಸೆನ್ಸ್‌ಗಳನ್ನು ಹೊಂದಿದ್ದು, ಇದನ್ನು ಸಾಗಾಣಿಕೆ ಮಾಡಲು ಕೆಎ–05/ಎಂ–3582 ನೋಂದಣಿ ಸಂಖ್ಯೆಯ ಮಾರುತಿ–800 ವಾಹನವನ್ನು ಉಪಯೋಗಿಸಲು ಇಟ್ಟುಕೊಂಡಿದ್ದ ಆರೋಪಕ್ಕಾಗಿ ವಾಹನ, ನಕಲಿ ಮದ್ಯ, ಬ್ಲೆಂಡ್ ಮದ್ಯ ಮತ್ತು ಇತರೆ ವಸ್ತುಗಳನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ: 19/2008–09 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13(ಎಫ್) 14ರ ರೀತ್ಯಾ ಅಪರಾಧವಾಗಿದ್ದು, ಕಲಂ 32, 38(ಎ) ಹಾಗೂ 43 ಮತ್ತು 43(ಎ)ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಎಂ.ರಾಜು ಎಂಬ ಆರೋಪಿಯನ್ನು ಬಂಧಿಸಿ, ನ್ಯಾಯಾಲಯದ ವಶಕ್ಕೆ ಒಪ್ಪಿಸಿರುವುದಾಗಿ ಪ್ರಥಮ ಮಾಹಿತಿ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಬೆಂಗಳೂರು ಉತ್ತರ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿ: 30–01–2009ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದ್ದು, ಸದರಿಯವರು ವಾಹನವು ಈ ಕಚೇರಿ ವ್ಯಾಪ್ತಿಗೆ ಬರುವುದಿಲ್ಲವಾದ್ದರಿಂದ ಮೂಲ ನೋಂದಣಿ ಪ್ರಾಧಿಕಾರವಾದ ಬೆಂಗಳೂರು (ದಕ್ಷಿಣ) ಇವರ ಸಂಪರ್ಕಿಸಬೇಕಾಗಿ ತಿಳಿಸಿರುತ್ತಾರೆ. ಅದರಂತೆ 'ಬಿ' ವಹಿಯನ್ನು ಕೋರಿ, ಬೆಂಗಳೂರು (ದಕ್ಷಿಣ) ಇವರಿಗೆ ಪತ್ರ ಬರೆಯಲಾಗಿ, ಈವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಕಡತ ಪರಿಶೀಲಿಸಲಾಯಿತು. ಕೆಳಕಂಡ ದಾಖಲಾತಿಗಳು ಕಂಡುಬಂದಿರುತ್ತವೆ.

1) ಶೋಧನ ಸಮುಚಿತ ಆಧಾರ
2) ಮಹಜರ್ ಕ್ರಮ
3) ಮೆಮೊ ಆಫ್ ಆರೆಸ್ಟ್
4) ಜಡ್ತಿ ಪತ್ರ
5) ಸ್ವತ್ತಿನ ಪಟ್ಟಿ
6) ಪ್ರಥಮ ಮಾಹಿತಿ ವರದಿ

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:27.11.2008ರಂದು ಮೈಸೂರು ತಾಲ್ಲೂಕು, ಹೂಟಗಳ್ಳಿ ಎಸ್.ಆರ್. ಎಸ್ ಕಾಲೋನಿ, ವಿಶ್ವ ಕರ್ಮ ಸಮಿತಿ ಎಂದು ನಾಮಾಂಕಿತ ಹೊಂದಿರುವ ಫಲಕದ ಪಕ್ಕದಲ್ಲಿರುವ ಎಂ. ರಾಜು ಬಿನ್ ಮಹದೇವು ಇವರ ವಾಸದ ಮನೆಯಲ್ಲಿ 112.320 ಲೀ. ನಕಲಿ ಮದ್ಯ, 105 ಲೀ. ಸಂಸ್ಕರಿಸಿದ ಮದ್ಯ (ಬ್ಲೆಂಡ್) ಖಾಲಿ ಸೀಸೆಗಳು, ಲೇಬಲ್‌ಗಳು, ಕಾರ್ಕ್‌ಗಳು, ಭದ್ರತಾ ಅಂಟು ಚೀಟಿಗಳು ಮತ್ತು ವೆನಿಲಾ ಎಸೆನ್ಸ್‌ಗಳನ್ನು ಹೊಂದಿದ್ದು, ಇದನ್ನು ಸಾಗಾಣಿಕೆ ಮಾಡಲು ಕೆಎ–05/ಎಂ–3582 ನೋಂದಣಿ ಸಂಖ್ಯೆಯ ಮಾರುತಿ–800 ವಾಹನವನ್ನು ಉಪಯೋಗಿಸಲು ಇಟ್ಟುಕೊಂಡಿದ್ದುದು ಕಂಡುಬಂದಿರುತ್ತದೆ. ಸಂದರ್ಭದಲ್ಲಿ ಆರೋಪಿ ಎಂ. ರಾಜು ಬಿನ್ ಮಹದೇವ ಇವರನ್ನು ದಸ್ತಗಿರಿಗೊಳಿಸಲಾಗಿರುತ್ತದೆ. ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ/ ವಾಹನ ಮಾಲೀಕರಾಗಲೀ ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಹಾಜರಾಗಿ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 6 ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನೇ ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/251/2008–09, ದಿನಾಂಕ:28ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ಉಪ ನಿರೀಕ್ಷಕರು, ಗುಪ್ತ ವಾರ್ತಾದಳ, ಮೈಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:19/2008–09, ದಿನಾಂಕ:27–11–08ರಂದು ವಶಪಡಿಸಿಕೊಂಡ ಕೆಎ–05/ಎಂ–3582 ನೋಂದಣಿ ಸಂಖ್ಯೆಯ ಮಾರುತಿ–800 ವಾಹನವನ್ನು, 112.320 ಲೀ. ನಕಲಿ ಮದ್ಯ, 105 ಲೀ. ಬ್ಲೆಂಡ್ ಮದ್ಯ ಮತ್ತು ಇತರೆ ವಸ್ತುಗಳನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಮೇ ತಿಂಗಳ 28ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**

ಪಿ.ಆರ್.526

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:457/2008–09, ದಿನಾಂಕ:28ನೇ ಮೇ, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಫಿರ್ಯಾದುದಾರರು** | | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ಉಪ ನಿರೀಕ್ಷಕರು | **ವಿರುದ್ಧ** | 1) ಕೆ.ಎಸ್.ರಾಜು ಬಿನ್ ಕೆ.ಹೆಚ್.ಶಿವಣ್ಣ |
| ಹುಣಸೂರು ವಲಯ, ಹುಣಸೂರು. | | 2) ಕೆ.ಹೆಚ್.ಶಿವಣ್ಣ ಬಿನ್ ಲೇ॥ ಹೊನ್ನಪ್ಪ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:14–03–2009ರಂದು ಬೆಳಿಗ್ಗೆ 8:50 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಹುಣಸೂರು ವಲಯ, ಇವರು ಹುಣಸೂರು ತಾಲ್ಲೂಕು, ಹುಣಸೂರು–ಕೆ.ಆರ್.ನಗರ ಬೈಪಾಸ್ ರಸ್ತೆಯ ಕಲ್ಕುಣಿಕೆಯಲ್ಲಿರುವ ಕೆ.ಎಸ್.ರಾಜು ಬಿನ್ ಕೆ.ಹೆಚ್.ಶಿವಣ್ಣ ಎಂಬುವರಿಗೆ ಸೇರಿದ ತೋಟದ ಹೆಂಚಿನ ಮನೆಯ ಒಳಭಾಗದ ಅಂಗಳದಲ್ಲಿ ಸುಮಾರು 3 ರಿಂದ 4 ದೊಡ್ಡ ಬಿಂದಿಗೆಗಳಿದ್ದು, ಅವುಗಳಲ್ಲಿ 110 ಲೀ. ಸೇಂದಿಯನ್ನು ಹೊಂದಿದ್ದು, ಇದನ್ನು ಸಾಗಾಣಿಕೆ ಮಾಡಲು ಕೆಎ–09/ಎಸ್–8673 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್–50 ವಾಹನವನ್ನು ಉಪಯೋಗಿಸಲು ಇಟ್ಟುಕೊಂಡಿದ್ದ ಆರೋಪಕ್ಕಾಗಿ ವಾಹನ ಮತ್ತು ಸೇಂದಿಯನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ: 16/2008–09 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13(1) (ಎ) ಮತ್ತು (ಸಿ) ರೀತ್ಯಾ ಅಪರಾಧವಾಗಿದ್ದು, ಕಲಂ 32, 38(ಎ) ರೀತ್ಯಾ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಕೆ.ಎಸ್.ರಾಜು ಎಂಬ ಆರೋಪಿಯನ್ನು ಬಂಧಿಸಿ, ನ್ಯಾಯಾಲಯದ ವಶಕ್ಕೆ ಒಪ್ಪಿಸಿರುವುದಾಗಿ ಪ್ರಥಮ ಮಾಹಿತಿ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ವಿವರವುಳ್ಳ 'ಬಿ' ವಹಿಯನ್ನು ಕೋರಿ, ಮೈಸೂರು ಪೂರ್ವ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:20–03–2009 ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದೆ. ಹುಣಸೂರು ವಲಯದ ಅಬಕಾರಿ ನಿರೀಕ್ಷಕರು, ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ 'ಬಿ' ವಹಿಯ ಪ್ರತಿಯನ್ನು ಪಡೆದು, ತಮ್ಮ ದಿನಾಂಕ: 08–05–09 ರ ಪತ್ರದಲ್ಲಿ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. 'ಬಿ' ವಹಿಯನ್ನು ಪರಿಶೀಲಿಸಲಾಗಿ, ಚಾರ್ಸಿಸ್ ನಂ. ಎ810ಎಫ್–999836, ಇಂಜಿನ್ ನಂ.ಎ810ಎಂ–981668 ಆಗಿದ್ದು, ಕೆ.ಹೆಚ್.ಶಿವಣ್ಣ ಬಿನ್ ಲೇ॥ ಕೆ.ಬಿ.ಹೊನ್ನಪ್ಪ, ರಂಗನಾಥ ಬಡಾವಣೆ, ಕೆ.ಆರ್.ನಗರ ರಸ್ತೆ, ಕಲ್ಕುಣಿಕೆ, ಹುಣಸೂರು ತಾಲ್ಲೂಕು ಇವರ ಒಡೆತನದಲ್ಲಿದ್ದು, ವಾಹನ ಮತ್ತು ಸೇಂದಿಯನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ) ರ ಅಡಿಯಲ್ಲಿ ಕಾರಣ ಕೇಳಿ ನೋಟೀಸ್ ನೀಡಲಾಗಿರುತ್ತದೆ. ಸದರಿ ನೋಟೀಸ್‌ನ್ನು ವಾಹನ ಮಾಲೀಕರಿಗೆ ದಿನಾಂಕ:19–05–09ರಂದು ಹುಣಸೂರು ವಲಯದ ಅಬಕಾರಿ ನಿರೀಕ್ಷಕರು, ಜಾರಿಗೊಳಿಸಿ, ದಿನಾಂಕ: 28–05–09ರಂದು ಸ್ವೀಕೃತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಕರಣದಲ್ಲಿ ಮಾದರಿ ತೆಗೆಯಲಾದ ಮಾದಕ ದ್ರವ್ಯಗಳನ್ನು ಬೆಂಗಳೂರಿನ ಮುಖ್ಯ ರಾಸಾಯನಿಕ ತಜ್ಞರಿಗೆ ಕಳುಹಿಸಿ, ತಮ್ಮ ವರದಿ ದಿನಾಂಕ:04–05–09 ರಲ್ಲಿ ಈಥೈಲ್ ಆಲ್ಕೋಹಾಲ್ ಅಂಶ ಕಂಡುಬಂದಿದ್ದು, ಅವು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಕಡತ ಪರಿಶೀಲಿಸಲಾಯಿತು. ಕೆಳಕಂಡ ದಾಖಲಾತಿಗಳು ಕಂಡುಬಂದಿರುತ್ತವೆ.

1) ಶೋಧನ ಸಮುಚಿತ ಆಧಾರ
2) ಮಹಜರ್ ಕ್ರಮ
3) ಮೆಮೊ ಆಫ್ ಆರೆಸ್ಟ್
4) ಜಪ್ತಿ ಪತ್ರ
5) ಸ್ವತ್ತಿನ ಪಟ್ಟಿ
6) ಪ್ರಥಮ ಮಾಹಿತಿ ವರದಿ
7) ರಾಸಾಯನಿಕ ತಜ್ಞರ ವರದಿ
8) ರಿಮ್ಯಾಂಡ್ ಅರ್ಜಿ

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ:14.03.09ರಂದು ಹುಣಸೂರು ತಾಲ್ಲೂಕು, ಹುಣಸೂರು–ಕೆ.ಆರ್.ನಗರ ಬೈಪಾಸ್ ರಸ್ತೆಯ ಕಲ್ಕುಣಿಕೆಯಲ್ಲಿರುವ ಕೆ.ಎಸ್.ರಾಜು ಬಿನ್ ಕೆ.ಹೆಚ್. ಶಿವಣ್ಣ ಎಂಬುವರಿಗೆ ಸೇರಿದ ತೋಟದ ಹೆಂಚಿನ ಮನೆಯ ಒಳಭಾಗದ ಅಂಗಳದಲ್ಲಿ ಸುಮಾರು 3 ರಿಂದ 4 ದೊಡ್ಡ ಬಿಂದಿಗೆಗಳಿದ್ದು, ಅವುಗಳಲ್ಲಿ 110 ಲೀ. ಸೇಂದಿಯನ್ನು ಹೊಂದಿದ್ದು, ಇದನ್ನು ಸಾಗಾಣಿಕೆ ಮಾಡಲು ಕೆಎ–09/ಎಸ್–8673 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್–50 ವಾಹನವನ್ನು ಉಪಯೋಗಿಸಲು ಇಟ್ಟುಕೊಂಡಿದ್ದುದು ಕಂಡುಬಂದಿರುತ್ತದೆ. ಸಂದರ್ಭದಲ್ಲಿ ಆರೋಪಿ ಕೆ.ಎಸ್.ರಾಜು ಬಿನ್ ಕೆ.ಹೆಚ್.ಶಿವಣ್ಣ ಇವರನ್ನು ದಸ್ತಗಿರಿಗೊಳಿಸಲಾಗಿರುತ್ತದೆ. ಅಲ್ಲದೇ 'ಬಿ' ವಹಿ ರನ್ವಯ ವಾಹನ ಮಾಲೀಕರಾದ ಕೆ.ಹೆಚ್.ಶಿವಣ್ಣ ಬಿನ್ ಲೇ॥ ಕೆ.ಬಿ.ಹೊನ್ನಪ್ಪ, ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ:14–05–2009 ರಂದು ಕಲಂ 43(ಬಿ)ರ ಅಡಿಯಲ್ಲಿ ನೀಡಲಾದ ಕಾರಣ ಕೇಳುವ ನೋಟೀಸ್ ಜಾರಿಯಾಗಿದ್ದರೂ ಸಹ ಆರೋಪಿಯಾಗಲೀ/ವಾಹನ ಮಾಲೀಕರಾಗಲೀ ತಮ್ಮ ನಿಲುವು ಏನೆಂಬುದನ್ನು ಮತ್ತು ತಮ್ಮ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ. ಹುಣಸೂರು ವಲಯದ ಅಬಕಾರಿ ನಿರೀಕ್ಷಕರು, ತಮ್ಮ ಪತ್ರ ದಿನಾಂಕ:28.05.09ರಲ್ಲಿ ಜಪ್ತುಗೊಳಿಸಲಾದ ವಾಹನವನ್ನು ಮತ್ತು ಸೇಂದಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವರದಿ ಮಾಡಿರುತ್ತಾರೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು ಎರಡು ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನೆ ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/457/2008–09, ದಿನಾಂಕ:28ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ಉಪ ನಿರೀಕ್ಷಕರು, ಹುಣಸೂರು ವಲಯ, ಹುಣಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:16/2008–09, ದಿನಾಂಕ:14–09–09 ರಂದು ವಶಪಡಿಸಿಕೊಂಡ ಕೆಎ–09/ಎಸ್–8673 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸ್‌ಎಲ್–50 ವಾಹನವನ್ನು ಮತ್ತು 110 ಲೀ. ಸೇಂದಿಯನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಮೇ ತಿಂಗಳ 28ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**

ಪಿ.ಆರ್.532

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:315(ಎ)/2007–08, ದಿನಾಂಕ:28ನೇ ಮೇ, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಪಿರ್ಯಾದುದಾರರು:** **ಪ್ರತಿವಾದಿ/ ಆರೋಪಿ**

ಅಬಕಾರಿ ಉಪ ನಿರೀಕ್ಷಕರು **ವಿರುದ್ಧ** 1) ತಲೆ ತಪ್ಪಿಸಿಕೊಂಡಿರುತ್ತಾನೆ.

ಹುಣಸೂರು ವಲಯ, ಹುಣಸೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:21–04–2008ರಂದು ಬೆಳಿಗ್ಗೆ 8:30 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಹುಣಸೂರು ವಲಯ, ಇವರು ಹುಣಸೂರು ತಾಲ್ಲೂಕು, ಹನಗೂಡು ಹೋಬಳಿ, ಕೊಟ್ಟಿಗೆ ಕಾವಲ್–ಕೂಡ್ಲೂರು ರಸ್ತೆ, ಕೊಟ್ಟಿಗೆ ಗ್ರಾಮದ ಕಾಲುವೆ ಹತ್ತಿರ ಅಕ್ರಮವಾಗಿ 40 ಲೀ. ಸೇಂದಿಯನ್ನು ಟಿಎನ್–29/ಕ್ಯೂ–6179 ನೋಂದಣಿ ಸಂಖ್ಯೆಯ ಬಜಾಜ್ ಎಂ–80 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಸೇಂದಿಯನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ: 02/2007–08 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13 (1) (ಎ) (ಸಿ) ಮತ್ತು 14ರ ರೀತ್ಯಾ ಅಪರಾಧವಾಗಿದ್ದು, ಕಲಂ 32, 34, 38(ಎ) ಮತ್ತು 43(ಎ)ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಆರೋಪಿ ತಲೆ ಮರೆಸಿಕೊಂಡಿರುವುದಾಗಿ ನಮೂದಿಸಿ, ಪ್ರಥಮ ಮಾಹಿತಿ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ತಮಿಳುನಾಡು ರಾಜ್ಯದ ಚೆನ್ನೈನ ಸಾರಿಗೆ ಆಯುಕ್ತರಿಗೆ ದಿನಾಂಕ: 21–07–2008ರಂದು ಈ ಪ್ರಾಧಿಕಾರದಿಂದ ಪತ್ರ ಬರೆದು, ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ 'ಬಿ' ವಹಿಯನ್ನು ಕಳುಹಿಸಲು ಸೂಚಿಸುವಂತೆ, ಕೋರಲಾಗಿದೆ. ಇದುವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಈ ಪ್ರಕರಣದಲ್ಲಿ ಮಾದರಿ ತೆಗೆಯಲಾದ ಮಾದಕ ದ್ರವ್ಯಗಳನ್ನು ಬೆಂಗಳೂರಿನ ಮುಖ್ಯ ರಾಸಾಯನಿಕ ತಜ್ಞರಿಗೆ ಕಳುಹಿಸಿ, ತಮ್ಮ ವರದಿ ದಿ: 22–04–2008ರಲ್ಲಿ ಈಥೈಲ್ ಆಲ್ಕೋಹಾಲ್ ಅಂಶ ಕಂಡುಬಂದಿದ್ದು, ಅವು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಕಡತ ಪರಿಶೀಲಿಸಲಾಯಿತು. ಕೆಳಕಂಡ ದಾಖಲಾತಿಗಳು ಕಂಡುಬಂದಿರುತ್ತವೆ.

1) ಶೋಧನ ಸಮುಚಿತ ಆಧಾರ
2) ಮಹಜರ್ ಕ್ರಮ
3) ಜಪ್ತಿ ಪತ್ರ
4) ಸ್ವತ್ತಿನ ಪಟ್ಟಿ
5) ಪ್ರಥಮ ಮಾಹಿತಿ ವರದಿ
6) ರಾಸಾಯನಿಕ ತಜ್ಞರ ವರದಿ

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ: 21.04.2008ರಂದು ಹುಣಸೂರು ತಾಲ್ಲೂಕು, ಹನಗೂಡು ಹೋಬಳಿ, ಕೊಟ್ಟಿಗೆ ಕಾವಲ್–ಕೂಡ್ಲೂರು ರಸ್ತೆ, ಕೊಟ್ಟಿಗೆ ಗ್ರಾಮದ ಕಾಲುವೆ ಹತ್ತಿರ ಅಕ್ರಮವಾಗಿ 40 ಲೀ. ಸೇಂದಿಯನ್ನು ಟಿಎನ್–29/ಕ್ಯೂ–6179 ನೋಂದಣಿ ಸಂಖ್ಯೆಯ ಬಜಾಜ್ ಎಂ–80 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿ ತಲೆ ಮರೆಸಿಕೊಂಡಿರುತ್ತಾನೆ. ಈ ವಾಹನಕ್ಕೆ ಸಂಬಂಧಪಟ್ಟ ಆರೋಪಿಯಾಗಲೀ / ವಾಹನ ಮಾಲೀಕರಾಗಲೀ ಈ ಪ್ರಾಧಿಕಾರದ ಮುಂದೆ ತಮ್ಮ ನಿಲುವು ಏನೆಂಬುದನ್ನು ಮತ್ತು ತಮ್ಮ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ. ಹುಣಸೂರು ವಲಯದ ಅಬಕಾರಿ ನಿರೀಕ್ಷಕರು, ತಮ್ಮ ಪತ್ರ ದಿ: 21.03.09 ರಲ್ಲಿ ಜಪ್ತುಗೊಳಿಸಲಾದ ವಾಹನವನ್ನು ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವರದಿ ಮಾಡಿರುತ್ತಾರೆ.

ಪ್ರಥಮ ಮಾಹಿತಿ ವರದಿಯಲ್ಲಿ ಆರೋಪಿಯು ತಲೆ ಮರೆಸಿಕೊಂಡಿರುವುದಾಗಿ ಮೊಕದ್ದಮೆಯನ್ನು ದಾಖಲಿಸಿ, ಸುಮಾರು (11) ತಿಂಗಳಿಗೂ ಹೆಚ್ಚು ಕಾಲ ಕಳೆದಿರುತ್ತದೆ. ಇಂತಹ ಪ್ರಕರಣಗಳಲ್ಲಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ರ ಅಡಿಯಲ್ಲಿ ಮೊಕದ್ದಮೆ ದಾಖಲಾದ ದಿನದಿಂದ ಒಂದು ತಿಂಗಳೊಳಗಾಗಿ ವಾಹನ ಮತ್ತು ಮಾದಕ ದ್ರವ್ಯಗಳು ತನ್ನದೆಂದು ಮಾಲೀಕತ್ವ ನಿರೂಪಿಸಲು ಮುಂದೆ ಬಾರದಿದ್ದ ಪಕ್ಷದಲ್ಲಿ ಅಂತಹ ವಾಹನ ಮತ್ತು ಮಾದಕ ದ್ರವ್ಯಗಳನ್ನು ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (11) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/315(ಎ)/2007–08, ದಿನಾಂಕ:28ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ಉಪ ನಿರೀಕ್ಷಕರು, ಹುಣಸೂರು ವಲಯ, ಹುಣಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 02/2007–08, ದಿ: 21–04–08 ರಂದು ವಶಪಡಿಸಿಕೊಂಡ ಟಿಎನ್–29/ಕ್ಯೂ–6179 ನೋಂದಣಿ ಸಂಖ್ಯೆಯ ಬಜಾಜ್ ಎಂ–80 ವಾಹನವನ್ನು ಮತ್ತು 40 ಲೀ. ಸೇಂದಿಯನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಮೇ ತಿಂಗಳ 28ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**

ಪಿ.ಆರ್.533

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:145/2008–09, ದಿನಾಂಕ:28ನೇ ಮೇ, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು:** | | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ಉಪ ನಿರೀಕ್ಷಕರು | **ವಿರುದ್ಧ** | 1) ರಂಗನಾಥ್ ಬಿನ್ ಯಲ್ಲಪ್ಪ |
| ಹುಣಸೂರು ವಲಯ, ಹುಣಸೂರು. | | 2) ಮಂಗಳಮ್ಮ ಕೋಂ ಶ್ರೀಕಂಠ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 28–09–2008 ರಂದು ಬೆಳಿಗ್ಗೆ 9:45 ಗಂಟೆ ಸಮಯದಲ್ಲಿ ಅಬಕಾರಿ ಉಪ ನಿರೀಕ್ಷಕರು, ಹುಣಸೂರು ವಲಯ, ಇವರು ಹುಣಸೂರು ತಾಲ್ಲೂಕು, ಬಿಳಿಕೆರೆ ಹೋ॥, ಹುಸೇನ್ ಪುರ ಪೋಸ್ಟ್‌ಗೆ ಸೇರಿದ ತೆಂಕನಕೊಪ್ಪಲು ಗ್ರಾಮದ ಸರ್ಕಲ್ ಬಳಿ, ಅಕ್ರಮವಾಗಿ 7.920 ಲೀ. ಮದ್ಯವನ್ನು ಕೆಎ–05/ಹೆಚ್–2751 ನೋಂದಣಿ ಸಂಖ್ಯೆಯ ಬಜಾಜ್ ಸ್ಕೂಟರ್ ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಪ್ರಥಮ ಮಾಹಿತಿ ವರದಿ ಸಂಖ್ಯೆ: 04/2008–09 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 13(1)(ಎ) ಮತ್ತು 14ರ ರೀತ್ಯಾ ಅಪರಾಧವಾಗಿದ್ದು, ಕಲಂ 32ರ ರೀತ್ಯಾ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ರಂಗನಾಥ ಬಿನ್ ಎಲ್ಲಪ್ಪ ಎಂಬ ಆರೋಪಿಯನ್ನು ಬಂಧಿಸಿ, ನ್ಯಾಯಾಲಯದ ವಶಕ್ಕೆ ಒಪ್ಪಿಸಿರುವುದಾಗಿ ಪ್ರಥಮ ಮಾಹಿತಿ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಶಪಡಿಸಿಕೊಂಡ ವಾಹನದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಕೋರಿ, ಬೆಂಗಳೂರು ಉತ್ತರ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:27–11–2008 ರಂದು ಈ ಪ್ರಾಧಿಕಾರದಿಂದ ಪತ್ರ ಬರೆಯಲಾಗಿದೆ. ಇದಕ್ಕೆ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ.

ಈ ಪ್ರಕರಣದಲ್ಲಿ ಮಾದರಿ ತೆಗೆಯಲಾದ ಮಾದಕ ದ್ರವ್ಯಗಳನ್ನು ಬೆಂಗಳೂರಿನ ಮುಖ್ಯ ರಾಸಾಯನಿಕ ತಜ್ಞರಿಗೆ ಕಳುಹಿಸಿ, ತಮ್ಮ ವರದಿ ದಿನಾಂಕ:26–11–08 ರಲ್ಲಿ ಈಥೈಲ್ ಆಲ್ಕೋಹಾಲ್ ಅಂಶ ಕಂಡುಬಂದಿದ್ದು, ಅವು ಮಾನವ ಸೇವನೆಗೆ ಯೋಗ್ಯವೆಂದು ರಾಸಾಯನಿಕ ತಜ್ಞರ ವರದಿಯಿಂದ ದೃಢಪಟ್ಟಿರುತ್ತದೆ.

ಕಡತ ಪರಿಶೀಲಿಸಲಾಯಿತು. ಕೆಳಕಂಡ ದಾಖಲಾತಿಗಳು ಕಂಡುಬಂದಿರುತ್ತವೆ.

1) ಶೋಧನ ಸಮುಚಿತ ಆಧಾರ
2) ಮಹಜರ್ ಕ್ರಮ
3) ಜಪ್ತಿ ಪತ್ರ
4) ಮಾದರಿ ಮೊಹರಿನ ನಕಲು
5) ಸ್ವತ್ತಿನ ಪಟ್ಟಿ
6) ಪ್ರಥಮ ಮಾಹಿತಿ ವರದಿ
7) ರಾಸಾಯನಿಕ ತಜ್ಞರ ವರದಿ

ಮೇಲ್ಕಂಡ ದಾಖಲಾತಿಗಳನ್ನು ಪರಿಶೀಲಿಸಲಾಯಿತು. ದಿನಾಂಕ: 28.09.2008 ರಂದು ಹುಣಸೂರು ತಾಲ್ಲೂಕು, ಬಿಳಿಕೆರೆ ಹೋ॥, ಹುಸೇನ್ ಪುರ ಪೋಸ್ಟ್‌ಗೆ ಸೇರಿದ ತೆಂಕನಕೊಪ್ಪಲು ಗ್ರಾಮ ಸರ್ಕಲ್ ಬಳಿ, ಅಕ್ರಮವಾಗಿ 7.920 ಲೀಟರ್ ಮದ್ಯವನ್ನು ಯಾವುದೇ ರಹದಾರಿ ಇಲ್ಲದೆ ಕೆಎ-05/ಹೆಚ್-2751 ನೋಂದಣಿ ಸಂಖ್ಯೆಯ ಬಜಾಜ್ ಸ್ಕೂಟರ್ ವಾಹನದಲ್ಲಿ ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ.

ಈ ಸಂದರ್ಭದಲ್ಲಿ ಆರೋಪಿ ರಂಗನಾಥ ಬಿನ್ ಯಲ್ಲಪ್ಪ, ಮೀನಾಕ್ಷಿ ಬಡಾವಣೆ, ಕೆ.ಆರ್.ನಗರ ಟೌನ್, ಇವರನ್ನು ದಸ್ತಗಿರಿಗೊಳಿಸಲಾಗಿರುತ್ತದೆ. ಸದರಿ ಆರೋಪಿಯಾಗಲೀ / ವಾಹನ ಮಾಲೀಕರಾಗಲೀ ಈ ಪ್ರಾಧಿಕಾರದ ಮುಂದೆ ತಮ್ಮ ನಿಲುವು ಏನೆಂಬುದನ್ನು ಮತ್ತು ತಮ್ಮ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ. ಹುಣಸೂರು ವಲಯದ ಅಬಕಾರಿ ನಿರೀಕ್ಷಕರು, ತಮ್ಮ ಪತ್ರ ದಿನಾಂಕ:21.03.09 ರಲ್ಲಿ ಜಪ್ತುಗೊಳಿಸಲಾದ ವಾಹನವನ್ನು ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವರದಿ ಮಾಡಿರುತ್ತಾರೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (8) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬರೂ ಇಂದಿನ ವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/145/2008-09, ದಿನಾಂಕ:28ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ಉಪ ನಿರೀಕ್ಷಕರು, ಹುಣಸೂರು ವಲಯ, ಹುಣಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:4/2008-09, ದಿನಾಂಕ:28-09-08 ರಂದು ವಶಪಡಿಸಿಕೊಂಡ ಕೆಎ-05/ಹೆಚ್-2751 ನೋಂದಣಿ ಸಂಖ್ಯೆಯ ಬಜಾಜ್ ಸ್ಕೂಟರ್ ವಾಹನವನ್ನು ಮತ್ತು 7.920 ಲೀ. ಮದ್ಯವನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಮೇ ತಿಂಗಳ 28ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**

ಪಿ.ಆರ್.534

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್:302(ಎ)/2007–08, ದಿನಾಂಕ:28ನೇ ಮೇ, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು:** | | **ಪ್ರತಿವಾದಿ/ ಆರೋಪಿ** |
|---|---|---|
| ಅಬಕಾರಿ ಉಪ ನಿರೀಕ್ಷಕರು<br>ಗುಪ್ತ ವಾರ್ತಾವಿಭಾಗ, ಮೈಸೂರು. | **ವಿರುದ್ಧ** | 1) ಎನ್. ವೆಂಕಟೇಶ್ ಬಿನ್ ನಾರಾಯಣಪ್ಪ,<br>ಶನಿ ಮಹಾತ್ಮ ಬಡಾವಣೆ, ಎನ್.ಆರ್.ಮೊಹಲ್ಲಾ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:30–01–2008 ರಂದು ರಾತ್ರಿ 11–00 ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ಗುಪ್ತ ವಾರ್ತಾ ವಿಭಾಗ, ಮೈಸೂರು ಇವರು ಮೈಸೂರು ಸಿಟಿ, ರಮಾಬಾಯಿನಗರ, ಆಶ್ರಯ ಮನೆ ನಂ. 185 ಮತ್ತು 186ರ ಮನೆಯ ಹತ್ತಿರ, ಕೆಎ–01/ಎಂಎ–485 ನೋಂದಣಿ ಸಂಖ್ಯೆಯ ಮಾರುತಿ–800 ವಾಹನದಲ್ಲಿ ಅಕ್ರಮವಾಗಿ 175 ಲೀ. ಮದ್ಯಸರ ಹಾಗೂ ವಿವಿಧ ಮಾದರಿಯ ಮದ್ಯ ಬಾಟಲ್‌ಗಳ ಮುಚ್ಚಳಗಳು, ಖಾಲಿ ಸೀಸೆಗಳು ಮತ್ತು ನಕಲಿ ಮದ್ಯ ತಯಾರಿಸಲು ಉಪಯೋಗಿಸುವ ಪರಿಕರಗಳನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದಕ್ಕಾಗಿ ವಾಹನ, ಮದ್ಯಸಾರ ಮತ್ತು ಇತರೆ ವಸ್ತುಗಳನ್ನು ಜಪ್ತು ಮಾಡಿ, ಪ್ರಕರಣ ಸಂಖ್ಯೆ:11/2007–08ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ರೀತ್ಯ ಮೊಕದ್ದಮೆ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ತಮ್ಮ ವರದಿಯೊಂದಿಗೆ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ವಾಹನವನ್ನು ಯಾರಿಂದ ವಶಪಡಿಸಿಕೊಳ್ಳಲಾಯಿತೊ ಅಂತ ಆರೋಪಿಗಳಿಗೆ ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ) ರ ಅಡಿಯಲ್ಲಿ ಕಾರಣ ಕೇಳಿ ನೋಟೀಸ್ ಕೇಳಲಾಗಿತ್ತು. ಸದರಿ ನೋಟೀಸ್ ಪಿ.ನಾರಾಯಣ, ಎನ್. ವೆಂಕಟೇಶ್ ಇವರಿಗೆ ಜಾರಿಯಾಗಿ ಸ್ವೀಕೃತಿಯು ದಿನಾಂಕ:28–02–2008 ರಂದು ಈ ಪ್ರಾಧಿಕಾರಕ್ಕೆ ಸ್ವೀಕೃತವಾಗಿರುತ್ತದೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯನ್ನು ಕೋರಿ ಬೆಂಗಳೂರು ಕೇಂದ್ರ ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿ: 16–02–.2008ರಂದು ಪತ್ರ ಬರೆಯಲಾಗಿದೆ. ಇದಕ್ಕೆ ಯಾವುದೇ ಪ್ರತಿಕ್ರಿಯೆ ದೊರೆಯದ ಕಾರಣ ದಿನಾಂಕ : 21–07–2008 ರಂದು ಮತ್ತು 05–11–2008ರಂದು ಮತ್ತೊಮ್ಮೆ ಪತ್ರ ವ್ಯವಹಾರ ನಡೆಸಲಾಗಿರುತ್ತದೆ. ಅದರಂತೆ 'ಬಿ' ವಹಿಯ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿರುತ್ತಾರೆ. ಅದನ್ನು ಪರಿಶೀಲಿಸಲಾಗಿ ಸಂಜಯ್ ಎಸ್.ಕಿಕ್ಲಾ ಬಿನ್ ಸುರೇಶ್ ಕಿಕ್ಲಾ, ನಂ.16, 7ನೇ ಮೈನ್, 1ನೇ ಬ್ಲಾಕ್, 80 ಅಡಿ ರಸ್ತೆ ಕೋರಮಂಗಲ, ಬೆಂಗಳೂರು ಇವರ ಒಡೆತನದಲ್ಲಿದ್ದು ಸದರಿ ವಾಹನ ಮಾಲೀಕರಿಗೆ ಈ ಪ್ರಾಧಿಕಾರದಿಂದ ದಿ: 12.12.08 ರಂದು ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕಲಂ 43(ಬಿ) ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ವಿಳಾಸದಲ್ಲಿ ಇಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂತಿರುಗಿಸಿರುತ್ತಾರೆ.

ಕಡತ ಪರಿಶೀಲಿಸಲಾಯಿತು. ದಿನಾಂಕ: 30–01–08 ರಂದು ಮೈಸೂರು ಸಿಟಿ, ರಮಾಬಾಯಿನಗರ, ಆಶ್ರಯ ಮನೆ ನಂ. 185 ಮತ್ತು 186 ರ ಮನೆಯ ಹತ್ತಿರ, ಕೆಎ–01/ಎಂಎ–485 ನೋಂದಣಿ ಸಂಖ್ಯೆಯ ಮಾರುತಿ–800 ವಾಹನದಲ್ಲಿ ಅಕ್ರಮವಾಗಿ 175 ಲೀ. ಮದ್ಯಸಾರ ಹಾಗೂ ವಿವಿಧ ಮಾದರಿಯ ಮದ್ಯ ಬಾಟಲ್‌ಗಳ ಮುಚ್ಚಳಗಳು, ಖಾಲಿ ಸೀಸೆಗಳು ಮತ್ತು ನಕಲಿ ಮದ್ಯ ತಯಾರಿಸಲು ಉಪಯೋಗಿಸುವ ಪರಿಕರಗಳನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿಗಳಾದ ಎನ್. ವೆಂಕಟೇಶ್ ಮತ್ತು ಪಿ. ನಾರಾಯಣ ಇವರನ್ನು ದಸ್ತಗಿರಿ ಮಾಡಲಾಗಿದ್ದು, ಇವರಿಗೂ ಸಹ ಈ ಪ್ರಾಧಿಕಾರದಿಂದ ಕಾರಣಕೇಳುವ ನೋಟಿಸನ್ನು ನೀಡಲಾಗಿದ್ದು ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ ಅಲ್ಲದೆ ಸದರಿ ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ / ವಾಹನ ಮಾಲೀಕರಾಗಲೀ ತಮ್ಮ ನಿಲುವು ಏನೆಂಬುದನ್ನು ಮತ್ತು ಮಾಲೀಕರ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಪ್ರಾಧಿಕಾರದ ಮುಂದೆ ಹಾಜರಾಗಿ ಇದುವರೆವಿಗೂ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ. ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (14) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನ ವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ /

ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/302(ಎ)/2008–09, ದಿನಾಂಕ:28ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ) (2) ರಡಿಯಲ್ಲಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬ್ಕಾರಿ ನಿರೀಕ್ಷಕರು, ಗುಪ್ತ ವಾರ್ತಾ ವಿಭಾಗ, ಮೈಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:11/2007–08, ದಿನಾಂಕ:30–01–08 ರಂದು ವಶಪಡಿಸಿಕೊಂಡ ಕೆಎ–01/ಎಂಎ–485 ನೋಂದಣಿ ಸಂಖ್ಯೆಯ ಮಾರುತಿ–800 ವಾಹನ, 175 ಲೀ. ಮದ್ಯಸಾರ ಮತು ಇತರೆ ವಸ್ತುಗಳನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಮೇ ತಿಂಗಳ 28ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.566

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್:202/08–05–09, ದಿನಾಂಕ:8ನೇ ಮೇ, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು:** | | **ಪ್ರತಿವಾದಿ/ ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಬದನವಾಳು ಪೊಲೀಸ್ ಠಾಣೆ, ನಂಜನಗೂಡು ತಾಲ್ಲೂಕು. | **ವಿರುದ್ಧ** | 1) ಮಹದೇವ ಬಿನ್ ಪುಟ್ಟಯ್ಯ, ಬಿಳುಗಲಿ, ನಂಜನಗೂಡು ತಾ॥.<br>2) ರವಿ ಬಿನ್ ರಂಗಸ್ವಾಮಿ, ಬಿಳುಗಲಿ ಗ್ರಾಮ, ನಂಜನಗೂಡು ತಾ॥. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ :14-10-2007ರಂದು ಬೆಳಿಗ್ಗೆ 11-40 ಗಂಟೆಯ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ಬದನವಾಳು ಪೋಲೀಸ್ ಠಾಣೆ, ನಂಜನಗೂಡು ತಾಲ್ಲೂಕು ಇವರು ನಂಜನಗೂಡು ತಾಲ್ಲೂಕು, ಬಿಳುಗಲಿ ಗ್ರಾಮದ ಮುರುಡ ಬಸವೇಶ್ವರ ದೇವಸ್ಥಾನದ ಬಳಿ ಟಿ.ವಿ.ಎಸ್ ಸ್ಟಾರ್ ಸಿಟಿ ಸಂಖ್ಯೆ : KA–09/EG-3318 ರಲ್ಲಿ ಅಕ್ರಮವಾಗಿ 17.280 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದ್ದಕ್ಕಾಗಿ ವಾಹನ ಮತ್ತು ಮದ್ಯವನ್ನು ವಶಪಡಿಸಿಕೊಂಡು, ಪ್ರ.ಮಾ.ವ ಸಂ. 148/07-08 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32 ಮತ್ತು 34ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆಯನ್ನು ದಾಖಲಿಸಿ, ಜಪ್ತುಗೊಳಿಸಲಾದ ವಾಹನ ಮತ್ತು ಮಾದಕ ದ್ರವ್ಯಗಳನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಕೋರಿರುತ್ತಾರೆ. ಅಂತೆಯೇ ದಿನಾಂಕ:24-10-2007ರಂದು ನಂಜನಗೂಡು ಜಾರಿ ಮತ್ತು ತನಿಖೆಯ ಅಬಕಾರಿ ಉಪ ನಿರೀಕ್ಷಕರಿಗೆ ಹಸ್ತಾಂತರಿಸಲು ಈ ಪ್ರಾಧಿಕಾರದಿಂದ ಅನುಮತಿ ನೀಡಲಾಗಿದೆ.

ನಂಜನಗೂಡು ಜಾರಿ ಮತ್ತು ತನಿಖೆಯ ಅಬಕಾರಿ ಉಪ ನಿರೀಕ್ಷಕರು ತಮ್ಮ ಪತ್ರದ ದಿನಾಂಕ:12-11-2007 ರಂದು ಈ ಪ್ರಕರಣದಲ್ಲಿ ಜಪ್ತುಗೊಳಿಸಲಾದ ವಾಹನ ಮತ್ತು ಮಾದಕ ದ್ರವ್ಯಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ವರದಿ ಮಾಡಿರುತ್ತಾರೆ. ಅಂತೆಯೇ ದಿನಾಂಕ:14-11-2007ರಂದು (ಮಾದರಿಯನ್ನು ಹೊರತುಪಡಿಸಿ) 17.280 ಲೀ. ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ಹೊರಡಿಸಲಾಗಿರುತ್ತದೆ. ವಾಹನದ ಮಾಲೀಕತ್ವದ ವಿವರವನ್ನು ಕೋರಿ, ಮೈಸೂರು ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ದಿನಾಂಕ:14-11-07ರಂದು ಪತ್ರ ಬರೆಯಲಾಗಿರುತ್ತದೆ. ಹಾಗೆಯೇ ಈ ಪ್ರಕರಣದ ಆರೋಪಿಗಳಾದ ಮಹದೇವ ಬಿನ್ ಪುಟ್ಟಯ್ಯ ಮತ್ತು ರವಿ ಬಿನ್ ರಂಗಸ್ವಾಮಿ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ:14-11-07 ರಂದು ವಾಹನ ಮತ್ತು ಮದ್ಯವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 43(ಬಿ) ಕಾರಣ ಕೇಳುವ ನೋಟೀಸನ್ನು ನೋಂದಣಿ ಅಂಚೆ ಮೂಲಕ ಜಾರಿಗೊಳಿಸಲಾಗಿದ್ದು, ಸದರಿ ನೋಟೀಸ್ 2 ಆರೋಪಿಗಳಿಗೆ ಜಾರಿಯಾಗಿ, ಸ್ವೀಕೃತಿಯು ಈ ಪ್ರಾಧಿಕಾರಕ್ಕೆ ಸ್ವೀಕೃತವಾಗಿರುತ್ತದೆ.

ಮಹದೇವ ಬಿನ್ ಪುಟ್ಟಯ್ಯ, ಬಿಳುಗಲಿ ಗ್ರಾಮ, ನಂಜನಗೂಡು ತಾಲ್ಲೂಕು ಇವರು ಸದರಿ ನೋಟೀಸಿಗೆ ಪ್ರತಿಕ್ರಿಯಿಸಿ, ತಾನು ಕಾನೂನಿನ ಅರಿವು ಇಲ್ಲದೇ ಈ ರೀತಿ ಮದ್ಯವನ್ನು ವಾಹನದಲ್ಲಿ ಹೊಂದಿ, ಸಾಗಿಸುತ್ತಿದ್ದುದ್ದನ್ನು ಒಪ್ಪಿಕೊಂಡಿರುತ್ತಾನೆ. ಆದ ಕಾರಣ ಪ್ರಾಧಿಕಾರವು ವಾಹನಕ್ಕೆ ಸೂಕ್ತ ಬೆಲೆಯನ್ನು ನಿಗದಿಪಡಿಸಿದಲ್ಲಿ, ಆ ಬೆಲೆಯನ್ನು ಸರ್ಕಾರಕ್ಕೆ ಸಂದಾಯ ಮಾಡುವುದಾಗಿ ಒಪ್ಪಿ, ವಾಹನವನ್ನು ತನ್ನ ವಶಕ್ಕೆ ಬಿಡುಗಡೆ ಮಾಡಿಕೊಡಬೇಕೆಂದು ಕೋರಿರುತ್ತಾನೆ.

ನಂಜನಗೂಡು ವಲಯದ ಅಬಕಾರಿ ಉಪ ನಿರೀಕ್ಷಕರು ಸದರಿ ವಾಹನದ ಮಾಲೀಕತ್ವದ ವಿವರವುಳ್ಳ "ಬಿ" ವಹಿಯ ಪ್ರತಿಯನ್ನು ಪಡೆದು, ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಇದನ್ನು ಪರಿಶೀಲಿಸಲಾಗಿ, ವಾಹನವು ಪಿ. ಮಹದೇವಸ್ವಾಮಿ ಬಿನ್ ಪುಟ್ಟಯ್ಯ ನಂ. 1, ಬಿಳುಗಲಿ ಗ್ರಾಮ, ನಂಜನಗೂಡು ತಾಲ್ಲೂಕು ಇವರ ಒಡೆತನದಲ್ಲಿರುವುದು ದೃಢಪಟ್ಟಿರುತ್ತದೆ. ಅರ್ಜಿದಾರರು / ವಾಹನದ ಮಾಲೀಕರು ಸ್ವತಃ ದಿನಾಂಕ:20.11.07ರಂದು ಪ್ರಾಧಿಕಾರಕ್ಕೆ ಸಲ್ಲಿಸಿರುವ ಮನವಿಯಲ್ಲಿ ಅವರ ತಿಳುವಳಿಕೆಯಲ್ಲಿ ಈ ಕೃತ್ಯ ನಡೆದಿರುವುದು ಸ್ಪಷ್ಟವಾಗಿ ಕಂಡುಬಂದಿರುತ್ತದೆ.

ಲಭ್ಯವಿರುವ ದಾಖಲಾತಿಗಳನ್ನು ಪರಿಶೀಲಿಸಲಾಗಿ, ದಿನಾಂಕ:14-10-2007ರಂದು ನಂಜನಗೂಡು ತಾಲ್ಲೂಕು, ಬಿಳುಗಲಿ ಗ್ರಾಮದ ಮುರುಡ ಬಸವೇಶ್ವರ ದೇವಸ್ಥಾನದ ಬಳಿ ಟಿ.ವಿ.ಎಸ್ ಸ್ಟಾರ್ ಸಿಟಿ ಸಂಖ್ಯೆ:KA-09/EG-3318 ರಲ್ಲಿ ಅಕ್ರಮವಾಗಿ 17.280 ಲೀ. ಮದ್ಯವನ್ನು ಯಾವುದೇ ರಹದಾರಿಯಿಲ್ಲದೆ ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದನ್ನು ಸ್ವತಃ ವಾಹನದ ಮಾಲೀಕರೇ ಒಪ್ಪಿಕೊಂಡಿರುತ್ತಾರೆ. ಆದ ಕಾರಣ ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/202/07–08, ದಿನಾಂಕ:8ನೇ ಮೇ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ)(2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಬದನವಾಳು ಪೋಲೀಸ್ ಠಾಣೆ, ನಂಜನಗೂಡು ತಾಲ್ಲೂಕು ಇವರ ಪ್ರಮಾವ ಸಂ:148/07, ದಿ:14-10-2007ರಂದು ವಶಪಡಿಸಿಕೊಂಡ ಸಂಖ್ಯೆ:KA-09/EG-3318 ನೋಂದಣಿ ಟಿ.ವಿ.ಎಸ್ ಸ್ಟಾರ್ ಸಿಟಿ ವಾಹನವನ್ನು (17.280 ಲೀ. ಮದ್ಯವನ್ನು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿರುತ್ತದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಲಾಗಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿಯ ಮೇ ತಿಂಗಳ 8ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಪ್ರಾಧಿಕಾರದ ಮೊಹರಿನೊಂದಿಗೆ ಹೊರಡಿಸಲಾಗಿದೆ.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ|| ವೈ. ಮಂಜುನಾಥ್**

ಪಿ.ಆರ್.619

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

## ಕರ್ನಾಟಕ ವಿಧಾನಸಭೆ

**ಸಂಖ್ಯೆ: ವಿಸಸ/ಶಾರಶಾ/24/ಸಿಎ/2008–09, ದಿನಾಂಕ:10ನೇ ಜುಲೈ, 2009**

**ವಿಷಯ:** ವಿಧಾನಸಭಾ ಸದಸ್ಯರ ವಿಳಾಸದ ಬದಲಾವಣೆ.

ಕುಷ್ಟಗಿ ವಿಧಾನಸಭಾ ಕ್ಷೇತ್ರದ ಮಾನ್ಯ ಸದಸ್ಯರಾದ ಶ್ರೀ ಅಮರೇಗೌಡ ಎಲ್. ಪಾಟೀಲ್ ಬಯ್ಯಾಪುರ ಅವರು ಕೆಳಕಂಡಂತೆ ತಮ್ಮ ವಿಳಾಸವನ್ನು ಬದಲಾಯಿಸಿರುತ್ತಾರೆ.

ಶ್ರೀ ಅಮರೇಗೌಡ ಎಲ್. ಪಾಟೀಲ್ ಬಯ್ಯಾಪುರ
ವಿಧಾನಸಭಾ ಸದಸ್ಯರು, ಚೌಡಕಿ ಬಡಾವಣೆ, ಕೊಪ್ಪಳ ರಸ್ತೆ, ಕುಷ್ಟಗಿ, ಕೊಪ್ಪಳ ಜಿಲ್ಲೆ.

ಆದಕಾರಣ, ಮಾನ್ಯ ಸದಸ್ಯರಿಗೆ ಇನ್ನು ಮುಂದೆ ಕಳುಹಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಮೇಲ್ಕಂಡ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಕೋರಲು ನಿರ್ದೇಶಿತನಾಗಿದ್ದೇನೆ.

**ಕೆ.ಸಿ. ಗೋಪಿಕೃಷ್ಣ**

ಪಿ.ಆರ್.649

ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ.

## ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಉತ್ತರ ಕನ್ನಡ, ಕಾರವಾರ

## ಪತ್ರಿಕಾ ಪ್ರಕಟಣೆ

**ನಂ.ಜಿಸಕಅ:ಕಾ.ತ.ಬೇ:ಪ್ರಕಟಣೆ:ಎಸ್–4:ಸಿಆರ್13:09–10, ದಿನಾಂಕ:29ನೇ ಜೂನ್, 2009**

**ವಿಷಯ:**2009–10ನೇ ಸಾಲಿನ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ತರಬೇತಿ ಮತ್ತು ಧನ ಸಹಾಯ ನೀಡುವ ಬಗ್ಗೆ.

2009–10ನೇ ಸಾಲಿಗೆ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ನಿರುದ್ಯೋಗಿ ಕಾನೂನು ಪದವೀಧರರಿಗೆ ಸ್ವತಂತ್ರವಾಗಿ ವಕೀಲ ವೃತ್ತಿ ಪ್ರಾರಂಭಿಸಲು ಸಹಾಯವಾಗುವಂತೆ ಪ್ರತಿಯೊಬ್ಬ ಕಾನೂನು ಪದವೀಧರರಿಗೆ 4 ವರ್ಷಗಳ ತರಬೇತಿ ಮತ್ತು ಬಾರ್ ಕೌನ್ಸಿಲ್‌ನಲ್ಲಿ ಹೆಸರು ನೊಂದಾಯಿಸಲು ಹಾಗೂ ಕಾನೂನು ಗ್ರಂಥಗಳನ್ನು ಖರೀದಿಸಲು ರೂ.5000–00 ಮೀರದಂತೆ ಧನ ಸಹಾಯ ನೀಡಲಾಗುತ್ತದೆ. ಧನ ಸಹಾಯ ಪಡೆಯುವ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ನಿರುದ್ಯೋಗಿ ಕಾನೂನು ಪದವೀಧರರಿಗೆ ವಾರ್ಷಿಕ ವರಮಾನ ರೂ.18000–00 ಮೀರದಂತೆ ಇರುವ ಅಭ್ಯರ್ಥಿಗಳು ಸದರ ಸೌಲಭ್ಯಕ್ಕೆ ಅರ್ಹರಿರುತ್ತಾರೆ. ಆದ್ದರಿಂದ ತರಬೇತಿ ಪಡೆಯಲಿಚ್ಛಿಸುವ ಅರ್ಹ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ದಿನಾಂಕ:31.09.2009 ರೊಳಗಾಗಿ ಸಂಬಂಧಪಟ್ಟ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಕಾರವಾರ ಇಲ್ಲಿಗೆ ಅರ್ಜಿ ಸಲ್ಲಿಸುವುದು. ಅರ್ಜಿ ನಮೂನೆ ಹಾಗೂ ಹೆಚ್ಚಿನ ಮಾಹಿತಿಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳವರ ಕಛೇರಿ ಕಾರವಾರ/ ಸಂಬಂಧಪಟ್ಟ ತಾಲ್ಲೂಕಿನ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಯವರಿಗೆ ಸಂಪರ್ಕಿಸಬಹುದು.

1) ಅರ್ಜಿದಾರರ ಗರಿಷ್ಠ ವಯೋಮಿತಿಯು ಅರ್ಜಿ ಸ್ವೀಕರಿಸಿದ ಕೊನೆಯ ದಿನಾಂಕದಂದು 35 ವರ್ಷ ಮೀರಿರಬಾರದು.

2) ಆಯ್ಕೆಯಾದ ಅಭ್ಯರ್ಥಿಗೆ ಡಿಸ್ಟ್ರಿಕ್ ಪಬ್ಲಿಕ್ ಪ್ರಾಸಿಕ್ಯೂಟರ್ ಗವರ್ನಮೆಂಟ್ ಅಡ್ವೋಕೇಟ್ ಅಥವಾ 20 ವರ್ಷಕ್ಕಿಂತ ಹೆಚ್ಚಿಗೆ ವಕೀಲ ವೃತ್ತಿ ನಡೆಸುತ್ತಿರುವ ವಕೀಲರ ಮುಖಾಂತರ ತರಬೇತಿ ನೀಡಲಾಗುವುದು.

3) ತರಬೇತಿಗಾಗಿ ಆಯ್ಕೆ ಮಾಡಿಕೊಳ್ಳಬೇಕಾದ ಅಭ್ಯರ್ಥಿಯು ಅರ್ಜಿ ಸ್ವೀಕರಿಸಲು ನಿಗದಿಪಡಿಸಿದ ತಾರೀಖಿನ ಹಿಂದೆ 2 ವರ್ಷಗಳ ವಕೀಲ ವೃತ್ತಿ ಮಾಡಿರಬೇಕು.

4) ಅರ್ಜಿ ಸಲ್ಲಿಸುವಾಗ ಎಲ್ಲಾ ದಾಖಲಾತಿ ಪತ್ರಗಳನ್ನು ದೃಢೀಕರಿಸಿ ಸಲ್ಲಿಸುವುದು.

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ
ಉತ್ತರ ಕನ್ನಡ, ಕಾರವಾರ.

ಪಿ.ಆರ್.594

**ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಗಳ ಕಛೇರಿ, ಉತ್ತರ ಕನ್ನಡ, ಕಾರವಾರ**

**ಪ್ರಕಟಣೆ**

**ಸಂಖ್ಯೆ: ಬಿಸಿಎಂ:ನಿಲಯ:ಕಾತಭ:ಸಿಆರ್–16:2009–10, ದಿನಾಂಕ:20ನೇ ಜೂನ್, 2009**

**ವಿಷಯ:** 2009–10ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ತರಬೇತಿ ನೀಡುವ ಕುರಿತು.

2009–10ನೇ ಸಾಲಿನಲ್ಲಿ ಉತ್ತರ ಕನ್ನಡ ಜಿಲ್ಲೆಯ ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ವಕೀಲ ವೃತ್ತಿ ಮತ್ತು ಜ್ಯೂಡಿಷಿಯಲ್ ಸೇವೆಗೆ ಸಂಬಂಧಿಸಿದಂತೆ ನ್ಯಾಯಾಡಳಿತದಲ್ಲಿ 4 ವರ್ಷಗಳ ತರಬೇತಿ ನೀಡುವ ಕುರಿತು ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಿದೆ. ಆಸಕ್ತ ಹಿಂದುಳಿದ ವರ್ಗಗಳ ಕಾನೂನು ಪದವೀಧರರು ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ಅರ್ಜಿಗಳನ್ನು ದಿನಾಂಕ:20.07.2009ರ ಒಳಗಾಗಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಗಳು, ಉತ್ತರ ಕನ್ನಡ, ಕಾರವಾರ ರವರಿಗೆ ಸಲ್ಲಿಸತಕ್ಕದ್ದು. ನಿಗದಿತ ಅರ್ಜಿ ನಮೂನೆಗಳನ್ನು ಈ ಕಛೇರಿಯಿಂದ ಪಡೆಯಬಹುದಾಗಿದೆ.

**ನಿಬಂಧನೆಗಳು:**

1) ಅಭ್ಯರ್ಥಿಯು ಕಾನೂನು ಪದವಿ ಮಾಡಿರಬೇಕು. ಹಿಂದುಳಿದ ವರ್ಗಕ್ಕೆ ಸೇರಿದವರಾಗಿರಬೇಕು. ರಾಜ್ಯದ ನಿವಾಸಿಯಾಗಿರಬೇಕು. ವಕೀಲಿ ವೃತ್ತಿ ಅಭ್ಯಾಸ (ಪ್ರಾಕ್ಟೀಸ್) ನಿಗದಿಪಡಿಸಿರುವ ಅರ್ಹತೆ ಹೊಂದಿದ್ದು ತರಬೇತಿಗೆ ಅರ್ಜಿ ಸಲ್ಲಿಸುವ ದಿನಾಂಕಕ್ಕಿಂತ ಮುಂಚಿತವಾಗಿ ಎರಡು ವರ್ಷದೊಳಗೆ ಬಾರ್ ಕೌನ್ಸಿಲ್‌ನಲ್ಲಿ ಹೆಸರು ನೋಂದಾಯಿಸಿಕೊಂಡಿರತಕ್ಕದ್ದು.

2) ಕಾನೂನು ತರಬೇತಿ ಭತ್ಯೆಗಾಗಿ ಜಿಲ್ಲೆಯಿಂದ ಹತ್ತು (10) ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಮಾಡಲಾಗುವುದು. ಪ್ರವರ್ಗ–1, 2ಎ, 3ಎ, 3ಬಿ, (3ಬಿ ಯಲ್ಲಿ ಕ್ರಿಶ್ಚಿನ್ ಮತ್ತು ಜೈನರುಗಳನ್ನು ಹೊರತುಪಡಿಸಿ)

3) ಅಭ್ಯರ್ಥಿಗಳ ಪಾಲಕರು/ ಪೋಷಕರ ವಾರ್ಷಿಕ ಆದಾಯ ಮಿತಿ ರೂ.15,000.00 ಒಳಗಿರಬೇಕು. ಪ್ರವರ್ಗ 1 ರಡಿಯಲ್ಲಿ ಬರುವ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಆದಾಯ ಮಿತಿ ಇರುವುದಿಲ್ಲ.

4) ತರಬೇತಿ ಅವಧಿಯು ನಾಲ್ಕು ವರ್ಷಗಳು ತರಬೇತಿ ಅವಧಿಯಲ್ಲಿ ಮಾಹೆಯಾನ ರೂ.1,000.00 ದಂತೆ ತರಬೇತಿ ಭತ್ಯೆ ನೀಡಲಾಗುವುದು.

5) ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳಿಗೆ ವಯೋಮಿತಿ 31 ವರ್ಷಗಳು, ಇತರೇ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ 30 ವರ್ಷಗಳು ಮೀರಿರಬಾರದು.

6) ಅಭ್ಯರ್ಥಿ ಕಾನೂನು ಪದವಿ ಮುಗಿಸಿ ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕಕ್ಕೆ ಎರಡು ವರ್ಷ ಒಳಗೊಂಡಿರಬೇಕು.

7) ಆಯ್ಕೆಯಾದ ಅಭ್ಯರ್ಥಿಗಳು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್, ಸರ್ಕಾರಿ ವಕೀಲರು ಇತರೇ ಯಾವುದೇ 20 ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರುವ ವಕೀಲರ ಹತ್ತಿರ ತರಬೇತಿಗೆ ನಿಯೋಜಿಸಲಾಗುವುದು.

8) ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಆದಾಯ, ಜಾತಿ ಪ್ರಮಾಣ ಪತ್ರ ನೀಡಿ ಆಯ್ಕೆಯಾಗಿರುವುದು ಕಂಡುಬಂದಲ್ಲಿ ಶಿಕ್ಷೆಗೆ ಗುರಿಪಡಿಸಿ ತರಬೇತಿ ಭತ್ಯೆ ನೀಡಿರುವ ಒಟ್ಟು ಹಣದ ಜೊತೆಗೆ ಶೇಕಡಾ 10% ಬಡ್ಡಿ ಸೇರಿ ಕಂದಾಯ ಬಾಕಿ ರೂಪದಲ್ಲಿ ವಸೂಲು ಮಾಡಲಾಗುವುದು.

9) ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಯನ್ನು ಮಧ್ಯಂತರದಲ್ಲಿ ಬಿಟ್ಟು ಹೋದಲ್ಲಿ ಪಡೆಯಲಾದ ಭತ್ಯೆಯ ಒಟ್ಟಿಗೆ ಶೇಕಡಾ 10%ರಷ್ಟು ಬಡ್ಡಿ ಸೇರಿಸಿ ಸರ್ಕಾರಕ್ಕೆ ಭರಣ ಮಾಡುವುದು.

10) ಅಪೂರ್ಣ ಹಾಗೂ ಸಕಾಲದಲ್ಲಿ ಬಾರದ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸಲಾಗುವುದು.

ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು
ಅಲ್ಪಸಂಖ್ಯಾತರ ಅಧಿಕಾರಿ, ಕಾರವಾರ.

ಪಿ.ಆರ್.593

## ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಚಿಕ್ಕಮಗಳೂರು

## ಪ್ರಕಟಣೆ

**ಸಂಖ್ಯೆ: ಜಿಸಕಅ:ಎಸ್‌ಡಬ್ಲ್ಯೂ7:ಸಿಆರ್:8:2009–10, ದಿನಾಂಕ:7ನೇ ಜುಲೈ, 2009**

**ವಿಷಯ:** ಪ.ಜಾತಿಗೆ ಸೇರಿದ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿ ನೀಡುವ ಕುರಿತು.

**ಉಲ್ಲೇಖ:** ಸರ್ಕಾರದ ಆದೇಶದ ಸಂಖ್ಯೆ: ಎಸ್‌ಡಬ್ಲ್ಯೂ 68:89: ದಿನಾಂಕ:02.11.1990.

ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ಪರಿಶಿಷ್ಟ ಕಾನೂನು ಪದವೀಧರರಿಗೆ 2009–10ನೇ ಸಾಲಿನ ಆಡಳಿತ ನ್ಯಾಯಾಧೀಕರಣದಲ್ಲಿ 4 ವರ್ಷದ ತರಬೇತಿಯನ್ನು ನೀಡುವ ಸಲುವಾಗಿ ಅರ್ಹ ವಿದ್ಯಾರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಯನ್ನು ಕರೆಯಲಾಗಿದೆ. ಈ ತರಬೇತಿಯನ್ನು ಪಡೆಯಲು ಇಚ್ಛಿಸುವ ಅಭ್ಯರ್ಥಿಗಳು ಈ ಕೆಳಕಂಡ ಅರ್ಹತೆಯನ್ನು ಹೊಂದಿರಬೇಕು.

1) ಅಭ್ಯರ್ಥಿಗಳು ಪರಿಶಿಷ್ಟ ಜಾತಿಗೆ ಸೇರಿದವರಾಗಿರಬೇಕು.

2) ಈ ಅಭ್ಯರ್ಥಿಗಳು ಆಡಳಿತ ನ್ಯಾಯಾಧೀಕರಣದಲ್ಲಿನ ವೃತ್ತಿಯನ್ನು ಕೈಗೊಳ್ಳಲು ಅರ್ಹತೆ ಹೊಂದುವ ಕಾನೂನು ಪದವಿಯನ್ನು ಪಡೆದಿರಬೇಕು.

3) ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ಮೂಲಕ ಅಭ್ಯರ್ಥಿಯನ್ನು ಸಂದರ್ಶನಕ್ಕೆ ಕರೆದು ಆಯ್ಕೆ ಮಾಡಲಾಗುವುದು. ಹಾಗೂ ಅವರನ್ನು 4 ವರ್ಷದ ತರಬೇತಿಗೆ ಸರ್ಕಾರಿ ಅಭಿಯೋಜಕರು ಹಾಗೂ ವಕೀಲರ ಬಳಿ ತರಬೇತಿಗೆ ನಿಯೋಜಿಸಲಾಗುವುದು.

4) ಈ ತರಬೇತಿಯ ಅವಧಿಯಲ್ಲಿ ಹಾಜರಾತಿ ಹಾಗೂ ದಿನಚರಿಯನ್ನು ಪಡೆದು ಪರಿಶೀಲಿಸಿ ಪ್ರತಿ ತಿಂಗಳು ರೂ.1000–00 ತರಬೇತಿ ಭತ್ಯೆಯನ್ನು ಹಾಜರಾತಿ ಅನುಸರಿಸಿ ಪಾವತಿಸಲಾಗುವುದು.

5) ಅಭ್ಯರ್ಥಿಗಳು ಸರ್ಕಾರದಿಂದ ರೂಪಿಸಲಾದ ನಿಯಮಗಳಿಗೆ ಬದ್ಧರಾಗಿರುವ ಬಗ್ಗೆ ತರಬೇತಿಯನ್ನು ಮಧ್ಯದಲ್ಲಿ ಬಿಡದಿರುವ ಬಗ್ಗೆ ಒಂದು ಮುಚ್ಚಳಿಕೆ ಪತ್ರವನ್ನು 15 ರೂ.ಗಳ ಛಾಪಾ ಕಾಗದದ ಮೇಲೆ ಬರೆದುಕೊಡಬೇಕು.

6) ತರಬೇತಿ ಅರ್ಜಿಯನ್ನು ಸಲ್ಲಿಸಲು ಇಚ್ಛಿಸುವ ಅಭ್ಯರ್ಥಿಗಳು ದ್ವಿಪ್ರತಿಯಲ್ಲಿ ಕೊನೆಯ ದಿನಾಂಕದೊಳಗೆ ಭರ್ತಿ ಮಾಡಿ ಎಸ್.ಎಸ್.ಎಲ್.ಸಿ.ಗೆ ಮೇಲ್ಪಟ್ಟ ಎಲ್ಲಾ ಪರೀಕ್ಷೆಗಳ ಅಂಕಪಟ್ಟಿ ಜಾತಿ ದೃಢೀಕರಣ ಪತ್ರವನ್ನು ಸಕ್ಷಮ ಅಧಿಕಾರಿಗಳಿಂದ ಪಡೆದು ನ್ಯಾಯವಾದಿ ವೃತ್ತಿಯನ್ನು ಆರಂಭಿಸಲು ಬೇಕಾಗುವ ಬಾರ್ ಕೌನ್ಸಿಲಿಂಗ್‌ನ ನೋಂದಣಿ ಪತ್ರದ ಪ್ರತಿಯೊಂದಿಗೆ ಅರ್ಜಿ ಸಲ್ಲಿಸಬೇಕು.

7) ಅರ್ಜಿ ಸಲ್ಲಿಸುವ ದಿನಾಂಕಕ್ಕೆ 2 ವರ್ಷಗಳ ಒಳಗೆ ಕಾನೂನು ಪದವಿಯನ್ನು ಪಡೆದ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳು ಮಾತ್ರ ಅರ್ಹರಾಗಿರುತ್ತಾರೆ.

8) ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕದಂದು ಅಭ್ಯರ್ಥಿಗಳ ವಯಸ್ಸು 35 ನ್ನು ಮೀರಬಾರದು.

9) ಆಯ್ಕೆಯಾದ ಅಭ್ಯರ್ಥಿಯು ಯಾವುದೇ ನೌಕರಿಯಲ್ಲಿ ಇರಬಾರದು ಅಥವಾ ತರಬೇತಿ ಸರ್ಕಾರಿ ಖಾಸಗಿ ಸೇವೆಯಲ್ಲಿ ಸೇರಿರಬಾರದು.

10) ಪೂರ್ತಿಯಾಗಿ ಭರ್ತಿಮಾಡಿದ ಅರ್ಜಿಗಳನ್ನು ಕಾರ್ಯದರ್ಶಿ, ಜಿಲ್ಲಾ ಮಟ್ಟದ ಆಯ್ಕೆ ಸಮಿತಿ, ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು, ಚಿಕ್ಕಮಗಳೂರು ಇವರಿಗೆ ದಿನಾಂಕ:15.07.2009ರ ಸಂಜೆ 5.30 ಗಂಟೆಯೊಳಗಾಗಿ ತಲುಪಿಸಬೇಕು.

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ,
ಚಿಕ್ಕಮಗಳೂರು.

ಪಿ.ಆರ್.631

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ನಡವಳಿಗಳು**

**ವಿಷಯ:** ಮೆ: ಕೈಸಿಯಾ ಕಟ್ಟಿ–ಮಾ ಗ್ರಾನೈಟ್ ಪ್ರೈವೇಟ್ ಲಿಮಿಟೆಡ್ ರವರು ದಿನಾಂಕ:09.03.2009ರಂದು ಸಲ್ಲಿಸಿರುವ ಪರಿಷ್ಕರಣ ಅರ್ಜಿ ಕುರಿತಂತೆ.

ಮೆ: ಕೈಸಿಯಾ ಕಟ್ಟಿ–ಮಾ ಗ್ರಾನೈಟ್ ಪ್ರೈವೇಟ್ ಲಿಮಿಟೆಡ್ ನಂ.2001, ಹೆಚ್.ಎ.ಎಲ್. 2ನೇ ಹಂತ, 100 ಅಡಿ ರಸ್ತೆ, ಬೆಂಗಳೂರು ಇವರಿಗೆ ರಾಯಚೂರು ಜಿಲ್ಲೆ, ಲಿಂಗಸಗೂರು ತಾಲ್ಲೂಕು, ಮುದಗಲ್ ಗ್ರಾಮದ ಸರ್ವೆ ನಂ.618ರಲ್ಲಿ 10–00 ಎಕರೆ ಪ್ರದೇಶದಲ್ಲಿ ಗ್ರೇ ಗ್ರಾನೈಟ್‌ಗಾಗಿ ದಿನಾಂಕ:10.12.2001 ರಿಂದ 10 ವರ್ಷಗಳ ಅವಧಿಗೆ ಕಲ್ಲುಗಣಿಗುತ್ತಿಗೆ ಸಂಖ್ಯೆ: 483 ಅನ್ನು ಮಂಜೂರು ಮಾಡಲಾಗಿತ್ತು. ಕಲ್ಲು ಗಣಿಗುತ್ತಿಗೆದಾರರು 2005–06ನೇ ಸಾಲಿನಿಂದ ಕಲ್ಲುಗಣಿಗುತ್ತಿಗೆ ಪ್ರದೇಶವನ್ನು ನಿಷ್ಕ್ರಿಯವಾಗಿಟ್ಟ ಕಾರಣ ಹಾಗೂ ಗುತ್ತಿಗೆ ಮೇಲಿನ ಬಾಕಿ ರೂ.3,05,964–00 ಅನ್ನು ಪಾವತಿಸದ ಕಾರಣ ನಿರ್ದೇಶಕ ನಡವಳಿ ಆದೇಶ ಸಂಖ್ಯೆ: ಗಭೂಇ/ಡಿಸಿಬಿ/ಕಗಗು/483/2006–07/3279–87 ದಿನಾಂಕ;07.02.2007ರಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಕಲ್ಲುಗಣಿಗುತ್ತಿಗೆಯನ್ನು ಕರ್ನಾಟಕ ಉಪ ಖನಿಜ ರಿಯಾಯತಿ ನಿಯಮಾವಳಿ 1994ರ ನಿಯಮ 6(1) ಮತ್ತು 39ರ ಮೇರೆಗೆ ರದ್ದುಪಡಿಸಲಾಯಿತು ಹಾಗೂ ಬಾಕಿ ಹಣವನ್ನು ಕಂದಾಯ ಬಾಕಿ ಎಂದು ವಸೂಲಿ ಮಾಡಲು ಬೆಂಗಳೂರು ನಗರ ಜಿಲ್ಲಾಧಿಕಾರಿಯವರಿಗೆ ಪ್ರಸ್ತಾವನೆ ಸಲ್ಲಿಸಲಾಯಿತು. ತತ್ಸಂಬಂಧ ಜಿಲ್ಲಾಧಿಕಾರಿಯವರು ಕಲ್ಲುಗಣಿಗುತ್ತಿಗೆದಾರರಿಗೆ ಸೂಚನಾಪತ್ರವನ್ನು ಹೊರಡಿಸಿರುತ್ತಾರೆ. ಜಿಲ್ಲಾಧಿಕಾರಿ, ಬೆಂಗಳೂರು ನಗರ ಇವರ ತಮ್ಮ ಪತ್ರ ದಿನಾಂಕ:29.02.2008ರಲ್ಲಿ ಕಲ್ಲುಗಣಿಗುತ್ತಿಗೆದಾರರ ವಿಳಾಸವು ಸ್ಪಷ್ಟವಾಗಿರದ ಕಾರಣ ಹಾಗೂ ಬಾಕಿದಾರರನ್ನು ಪತ್ತೆಹಚ್ಚಲು ಸಾಧ್ಯವಿಲ್ಲವೆಂದು ಪ್ರಕರಣವನ್ನು ಹಿಂದಿರುಗಿಸಿರುತ್ತಾರೆ.

ಮೆ: ಕೈಸಿಯಾ ಕಟ್ಟಿ–ಮಾ ಗ್ರಾನೈಟ್ ಪ್ರೈವೇಟ್ ಲಿಮಿಟೆಡ್ ಸಂಸ್ಥೆಯ ಪ್ರತಿನಿಧಿಯವರು ದಿನಾಂಕ:04.03.2009ರಲ್ಲಿ ಕಲ್ಲುಗಣಿಗುತ್ತಿಗೆ ಪ್ರದೇಶದಲ್ಲಿನ ಸ್ಥಳೀಯರ ತೊಂದರೆಯಿಂದಾಗಿ ಕಲ್ಲುಗಣಿ ಕಾರ್ಯವನ್ನು ಮುಂದುವರೆಸಲು ಸಾಧ್ಯವಾಗದ ಕಾರಣ ನಿಷ್ಕ್ರಿಯವಾಗಿರಸಲಾಯಿತು ಮತ್ತು ಕಲ್ಲುಗಣಿ ಗುತ್ತಿಗೆಯ ಮೇಲಿನ ಬಾಕಿಯನ್ನು ಪಾವತಿಸಲು ಸಾಧ್ಯವಾಗಲಿಲ್ಲ. ಕಲ್ಲುಗಣಿಗುತ್ತಿಗೆಯ ಬಗ್ಗೆ ವಿಚಾರಿಸಲಾಗಿ, ಕಲ್ಲುಗಣಿಗುತ್ತಿಗೆಯನ್ನು ದಿನಾಂಕ:07.02.2007ರಂದು ರದ್ದುಪಡಿಸಿರುವುದು ತಿಳಿದುಬಂದಿತು. ಕಲ್ಲುಗಣಿಗುತ್ತಿಗೆಯ ಮೇಲಿನ ಬಾಕಿ ಮೊತ್ತ ಬಡ್ಡಿ ಮತ್ತು ದಂಡವಾಗಿ ರೂ.5,60,000/–ಗಳನ್ನು ಪಾವತಿಸಿ ಕಲ್ಲುಗಣಿಗುತ್ತಿಗೆಯನ್ನು ಮಂಜೂರು ಮಾಡಲು ಕೋರಿರುತ್ತಾರೆ.

ಅರ್ಜಿದಾರರು ದಿನಾಂಕ:09.03.2009ರಂದು ತಮ್ಮ ಕಲ್ಲುಗಣಿಗುತ್ತಿಗೆಯನ್ನು ರದ್ದುಪಡಿಸಿದ ಆದೇಶದ ವಿರುದ್ಧ ಪರಿಷ್ಕರಣ ಅರ್ಜಿಯನ್ನು ಸಲ್ಲಿಸುತ್ತಾ, ತಾವು ಬದಲಾದ ವಿಳಾಸವನ್ನು ಕಛೇರಿಗೆ ನೀಡಲಾಗಿದ್ದರೂ ತಾವು ತಮ್ಮ ಕಲ್ಲುಗಣಿಗುತ್ತಿಗೆಯ ರದ್ಧತಿ ಆದೇಶವು ತಮಗೆ ತಲುಪಿರುವುದಿಲ್ಲ. ಅಲ್ಲದೆ ತಮ್ಮ ಸಂಸ್ಥೆಯ ನಿರ್ದೇಶಕರ ಅನಾರೋಗ್ಯ ಕಾರಣದಿಂದಾಗಿ ನಿಗದಿತ ಅವಧಿಯಲ್ಲಿ ಪರಿಷ್ಕರಣ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ಇಂಡಿಯನ್ ಲಿಮಿಟೇಷನ್ ಅಧಿನಿಯಮದ ನಿಯಮ 5(2)ರ ಮೇರೆಗೆ ವಿಳಂಬ ಮನ್ನಾ ಮಾಡಿ ತಮ್ಮ ಕಲ್ಲುಗಣಿಗುತ್ತಿಗೆಯನ್ನು ಪುನರ್ ಸ್ಥಾಪಿಸಲು ಕೋರಿರುತ್ತಾರೆ. ಸದರಿ ಪರಿಷ್ಕರಣ ಅರ್ಜಿಯ ಬಗ್ಗೆ ದಿನಾಂಕ:09.04.2009ರಂದು ವಿಚಾರಣೆಯನ್ನು ಏರ್ಪಡಿಸಲಾಗಿದ್ದಿತು. ವಿಚಾರಣೆಯ ಸಂದರ್ಭದಲ್ಲಿ ಸಂಸ್ಥೆಯ ಪ್ರತಿನಿಧಿಯವರು ಹಾಜರಿದ್ದು, ತಮ್ಮ ಕಲ್ಲುಗಣಿಗುತ್ತಿಗೆಯ ಮೇಲಿನ ಬಾಕಿಯನ್ನು ಪಾವತಿಸಿರುವುದಾಗಿಯೂ ಮತ್ತು ತಾವು ವಿಳಂಬವಾಗಿ ಸಲ್ಲಿಸಿರುವ ಪರಿಷ್ಕರಣ ಅರ್ಜಿಗೆ ವಿಳಂಬ ವಿನಾಯಿತಿಯನ್ನು ನೀಡಿ ತಮ್ಮ ಕಲ್ಲುಗಣಿಗುತ್ತಿಗೆಯನ್ನು ಪುನರ್ ಸ್ಥಾಪಿಸಲು ಕೋರಿ ಲಿಖಿತ ಮನವಿಯನ್ನು ಸಲ್ಲಿಸಿರುತ್ತಾರೆ.

ಅರ್ಜಿದಾರರು ತಿಳಿಸಿರುವಂತೆ ಸ್ಥಳೀಯ ತೊಂದರೆಯಿಂದಾಗಿ ಕಲ್ಲುಗಣಿಗುತ್ತಿಗೆಯನ್ನು ನಿಷ್ಕ್ರಿಯವಾಗಿರಿಸಿರುವುದರಿಂದಲೂ ಹಾಗೂ ಅವರ ಮನವಿಯಲ್ಲಿ ಪ್ರಸ್ತಾಪಿಸಿರುವಂತೆ ಪರಿಷ್ಕರಣ ಅರ್ಜಿಯನ್ನು ಸಲ್ಲಿಸುವಲ್ಲಿ ಆಗಿರುವ ವಿಳಂಬವನ್ನು ಅವರು ನೀಡಿರುವ ಸಕಾರಣದ ಮೇಲೆ ಮತ್ತು ಅವರು ಕಲ್ಲುಗಣಿಗುತ್ತಿಗೆಯ ರದ್ದು ಮಾಡಿರುವ ಅವಧಿಯವರೆವಿಗೆ ಬಾಕಿ ಮೊತ್ತ ಬಡ್ಡಿ ಮತ್ತು ದಂಡವನ್ನು ಪಾವತಿಸಿರುವುದರಿಂದ ಅರ್ಜಿದಾರರು ಸಲ್ಲಿಸಿರುವ ಪರಿಷ್ಕರಣ ಅರ್ಜಿಯನ್ನು ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮಾವಳಿ 1994ರ ನಿಯಮಗಳಡಿಯಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ: ಗಭೂಇ/ಡಿಸಿಬಿ/ಕಗಗು/483/2009–10/263, ದಿನಾಂಕ:5ನೇ ಏಪ್ರಿಲ್, 2009**

ಮೆ: ಕೈಸಿಯಾ ಕಟ್ಟಿ–ಮಾ ಗ್ರಾನೈಟ್ ಪ್ರೈವೇಟ್ ಲಿಮಿಟೆಡ್ ಇವರು ಹೊಂದಿದ್ದ ಕಲ್ಲುಗಣಿ ಗುತ್ತಿಗೆಯನ್ನು ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮಾವಳಿ ನಿಯಮ 6(1) ಮತ್ತು 39ರಡಿ ಪ್ರಸ್ತಾಪಿಸಲಾದಂತೆ ರದ್ದುಗೊಳಿಸಲಾದ ನಿರ್ದೇಶಕರು ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ನಡವಳಿ ಆದೇಶ ದಿನಾಂಕ:07.02.2007ರ ವಿರುದ್ಧ ಸಲ್ಲಿಸಿರುವ ಪರಿಷ್ಕರಣ ಅರ್ಜಿಯನ್ನು ಸಕ್ಷಮ ಪ್ರಾಧಿಕಾರವು ಪರಿಶೀಲಿಸಿ ವಿಳಂಬವಾಗಿ ಸಲ್ಲಿಸಿರುವ ಪರಿಷ್ಕರಣೆ ಅರ್ಜಿಗೆ ಸಂಬಂಧಿಸಿದಂತೆ ಸಲ್ಲಿಸಿರುವ ವಿವರಣೆಯನ್ನು ಪರಿಶೀಲಿಸಿ ಇಂಡಿಯನ್ ಲಿಮಿಟೇಶನ್ ಅಧಿನಿಯಮದ ನಿಯಮ 5(2)ರ ಮೇರೆಗೆ ವಿಳಂಬ ವಿನಾಯತಿಯನ್ನು ನೀಡಿದೆ ಹಾಗೂ ಕಲ್ಲು ಗಣಿಗುತ್ತಿಗೆದಾರರು ಗುತ್ತಿಗೆಯನ್ನು ರದ್ದುಪಡಿಸಿದ ದಿನಾಂಕದವರೆವಿಗೆ ಬಾಕಿ ಇದ್ದ ಮೊತ್ತ ಬಡ್ಡಿ ಮತ್ತು ನಿಯಮ 6(3)ರ ಅನುಸಾರ ದಂಡ ಸೇರಿದಂತೆ ರೂ.5,60,000/– ಗಳನ್ನು ಪಾವತಿಸಿರುವುದರಿಂದ,

ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ;02.07.1994ರಲ್ಲಿ ಪ್ರಸ್ತಾಪಿಸಿದಂತೆ ರಾಯಚೂರು ಜಿಲ್ಲೆ, ಲಿಂಗಸುಗೂರು ತಾಲ್ಲೂಕು, ಮುದಗಲ್ ಗ್ರಾಮದ ಸರ್ವೆ ನಂ.618ರಲ್ಲಿ 10–00 ಎಕರೆ ಪ್ರದೇಶದಲ್ಲಿ ಗ್ರೇ ಗ್ರಾನೈಟ್‌ಗಾಗಿ ಮಂಜೂರು ಮಾಡಲಾಗಿದ್ದ ಕಲ್ಲುಗಣಿಗುತ್ತಿಗೆಯನ್ನು ರದ್ದುಮಾಡಲಾದ ದಿನಾಂಕದಿಂದ (07.02.2007) ಗುತ್ತಿಗೆಯನ್ನು ಮಂಜೂರು ಮಾಡಲಾಗಿದ್ದ ಎಲ್ಲ ಷರತ್ತುಗಳನ್ನೊಳಗೊಂಡಂತೆ ಪುನರ್ ಸ್ಥಾಪಿಸಲಾಗಿದೆ.

ಪಿ.ಆರ್.364 ನಿರ್ದೇಶಕರು.

**ಕರ್ನಾಟಕ ಲೋಕಸೇವಾ ಆಯೋಗ**

**"ಉದ್ಯೋಗ ಸೌಧ", ಬೆಂಗಳೂರು–01**

**ಅಧಿಸೂಚನೆ**

**ಸಂಖ್ಯೆ: ಇ(1) 50/2009–10/ಪಿಎಸ್‌ಸಿ, ದಿನಾಂಕ:5ನೇ ಮೇ, 2009**

**ವಿಷಯ:** 2007–08ನೇ ಸಾಲಿನ ಪ್ರೌಢಶಾಲಾ ಮುಖ್ಯೋಪಾಧ್ಯಾಯರ 629 ಹುದ್ದೆಗಳ ಮುಖ್ಯ ಪರೀಕ್ಷೆಯಲ್ಲಿ ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿದ ಶ್ರೀ ವೀರೇಶ್ ಜನಮಟ್ಟಿ (ನೋಂ.ಸಂ.30006) ಅಭ್ಯರ್ಥಿಗೆ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:** 1) ಶ್ರೀ ವೀರೇಶ್ ಜನಮಟ್ಟಿ, ಇವರು 2007–08ನೇ ಸಾಲಿನ ಪ್ರೌಢಶಾಲಾ ಮುಖ್ಯೋಪಾಧ್ಯಾಯರ 629 ಹುದ್ದೆಗೆ ಸಲ್ಲಿಸಿದ ಅರ್ಜಿ.

2) ಶ್ರೀ ವೀರೇಶ್ ಜನಮಟ್ಟಿ, ಇವರಿಗೆ ಜಾರಿ ಮಾಡಿರುವ ಕಾರಣ ಕೇಳುವ ನೋಟೀಸಿನ ಸಂಖ್ಯೆ: ಸಿ.ಓ.ಎನ್. 268/2008–09/ಪಿಎಸ್‌ಸಿ, ದಿನಾಂಕ:20.02.2009.

3) ಶ್ರೀ ವೀರೇಶ್ ಜನಮಟ್ಟಿ, ಇವರಿಗೆ ಜಾರಿ ಮಾಡಿರುವ ಕಾರಣ ಕೇಳುವ ನೋಟೀಸಿನ ಸಂಖ್ಯೆ: ಸಿ.ಓ.ಎನ್. 322/2008–09/ಪಿಎಸ್‌ಸಿ, ದಿನಾಂಕ:09.03.2009.

ಮೇಲೆ ಓದಲಾದ 1ರನ್ವಯ ಶ್ರೀ ವೀರೇಶ್ ಜನಮಟ್ಟಿ, ಇವರು 2007–08ನೇ ಸಾಲಿನ ಪ್ರೌಢಶಾಲಾ ಮುಖ್ಯೋಪಾಧ್ಯಾಯರ 629 ಹುದ್ದೆಗೆ ಸಲ್ಲಿಸಿದ್ದ ಅರ್ಜಿಯ ಮೇರೆಗೆ ಇವರಿಗೆ ಮುಖ್ಯ ಪರೀಕ್ಷೆ ತೆಗೆದುಕೊಳ್ಳಲು ನೋಂದಣಿ ಸಂಖ್ಯೆ: 30006ರ ಪ್ರವೇಶ ಪತ್ರವನ್ನು ಜಾರಿ ಮಾಡಲಾಗಿತ್ತು. ಅದರಂತೆ ಇವರು ಶಿಕ್ಷಣ ಪತ್ರಿಕೆ–1ರ ಪರೀಕ್ಷಾ ಸಮಯದಲ್ಲಿ ಮೊಬೈಲ್ ದೂರವಾಣಿಯೊಂದನ್ನು ಇಟ್ಟುಕೊಂಡು ಪರೀಕ್ಷಾ ಸೂಚನೆಗಳನ್ನು ಉಲ್ಲಂಘಿಸಿರುತ್ತಾರೆ ಎಂಬುದಾಗಿ ಪರೀಕ್ಷಾ ಕೇಂದ್ರದ ಮೇಲ್ವಿಚಾರಕರು ವರದಿ ಮಾಡಿದ್ದ ಕಾರಣ ಮೇಲೆ ಓದಲಾದ (2)ರನ್ವಯ ಸದರಿ ಅಭ್ಯರ್ಥಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಈ ನೋಟೀಸಿಗೆ ಸದರಿ ಅಭ್ಯರ್ಥಿಯು ಯಾವುದೇ ಉತ್ತರವನ್ನು ನೀಡಿರುವುದಿಲ್ಲ. ಆದುದರಿಂದ ಮೇಲೆ ಓದಲಾದ (3)ರನ್ವಯ ಸದರಿ ಅಭ್ಯರ್ಥಿಗೆ ಕಾರಣ ಕೇಳುವ ಮತ್ತೊಂದು ಅಂತಿಮ ನೋಟೀಸನ್ನು ಕಳುಹಿಸಿದ್ದು, ಸದರಿ ನೋಟೀಸಿಗೂ ಅಭ್ಯರ್ಥಿಯು ಯಾವುದೇ ಉತ್ತರವನ್ನು ಸಲ್ಲಿಸಿರುವುದಿಲ್ಲ.

ಸದರಿ ಅಭ್ಯರ್ಥಿಯ ಪ್ರಕರಣವನ್ನು ಆಯೋಗದ ಮುಂದೆ ಮಂಡಿಸಿದ್ದು, ಆಯೋಗವು ಈ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿ ಕೆಳಗಿನಂತೆ ದಂಡನೆ ವಿಧಿಸಲು ಆದೇಶಿಸಿರುತ್ತದೆ.

**ಆದೇಶ ಸಂಖ್ಯೆ: ಇ(1) 49/2009–10/ಪಿಎಸ್‌ಸಿ, ಬೆಂಗಳೂರು, ದಿನಾಂಕ:5ನೇ ಮೇ, 2009**

ಕರ್ನಾಟಕ ಲೋಕಸೇವಾ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ ಆಡಳಿತ 398/93–94/ಪಿಎಸ್‌ಸಿ, ದಿನಾಂಕ:14.09.1993ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ವೀರೇಶ್ ಜನಮಟ್ಟಿ, ನೋಂದಣಿ ಸಂಖ್ಯೆ: 30006, ಯಡಗುಡ್ ಹಳ್ಳಿ ಮತ್ತು ಅಂಚೆ, ಹುಕ್ಕೇರಿ ತಾಲ್ಲೂಕು, ಬೆಳಗಾವಿ–591309, ಇವರಿಗೆ 2007–08ನೇ ಸಾಲಿನ ಪ್ರೌಢಶಾಲಾ ಮುಖ್ಯೋಪಾಧ್ಯಾಯರ 629 ಹುದ್ದೆಗಳ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸುವ ದಂಡನೆಯನ್ನು ವಿಧಿಸಲಾಗಿದೆ.

ಆಯೋಗದ ಆದೇಶದ ಮೇರೆಗೆ,

ಪಿ.ಆರ್.402 **ವಿ.ಬಿ. ಪಾಟೀಲ್,**

ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on 'scrap of certain commodities'-reg.

**Ref:** Application Dated:20.04.2009 and letter Dated:06.06.2009 of Sri Anwar Basha, Proprietor, Anwar & Co., No.35, Beli Masjid Road, Cross, Jolly Mohalla, Bangalore-560053.

In the application cited above, Sri Anwar Basha, Proprietor, Anwar & Co., No.35, Beli Masjid Road, Cross, Jolly Mohalla, Bangalore-560053, has sought clarification regarding the rate of tax applicable on 'scrap of certain commodities'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.11/09-10, Dated:26th June, 2009**

It is hereby clarified that 'mixed scrap' are taxable at 12.5% under Section 4(1)(b) of the Karnataka Value Added Tax Act, 2003.

**B.A. HARISH GOWDA**

PR-630

Commissioner of Commercial Taxes,
(Karnataka), Bangalore.

**DEPARTMENT OF COMMERCIAL TAXES**

**Office of the Commissioner of Commercial Taxes in Karnataka, Gandhinagar, Bangalore**

**NOTIFICATION**

**No.KSA CR.155/2007-08, Bangalore, Dated:8th June, 2009**

In exercise of the powers under clause (b) of sub-rule (3) of Rule 33 of the Karnataka Value Added Tax Rules, 2005, it is hereby notified that, commencing from the tax period of the month of June, 2009,-

(1) every dealer registered under the Karnataka Value Added Tax Act, 2003 who is effecting sale of any goods in the course of export outside the territory of India; and

(2) every dealer registered under the Karnataka Value Added Tax Act, 2003 who is claiming deduction of input tax of five lakh rupees or more under section 10 of the said Act for the year ending 31st March, 2008 or in any subsequent year as declared in the monthly returns filed for that year, shall enter in the website: http://vat.kar.nic.in/, the details of-

(i) his purchase of goods made within the State from other registered dealers in respect of which he is eligible to claim refund or deduction of input tax,

(ii) his sales of goods in the course of export outside the territory of India, and

(iii) his sales of goods made to other registered dealers in the State,

On or before the 20th day of the succeeding month in the following manner:

(a) The dealer shall operate his account in the website using the user name and password communicated to him by the Commissioner and in case such user name and password is not communicated by 30th June, 2009, he shall obtain the same from the Commissioner or from the jurisdictional Local VAT officer or VAT sub-officer.

(b) He shall follow the procedure and instructions as specified in the website to enter the details specified in clauses (i), (ii) and (iii) above.

**Explanation:** This notification shall not be applicable to those dealers who are covered by earlier notifications already issued under clause (b) of sub-rule (3) of Rule 33 of the Karnataka Value Added Tax Rules, 2005.

**B.A. HARISH GOWDA**

PR-636

Commissioner of Commercial Taxes
In Karnataka, Bangalore.

ಕಛೇರಿಯ ಪತ್ರಗಳಲ್ಲಿ ಎರಡು ಬಾರಿ ಅವಧಿಯನ್ನು ವಿಸ್ತರಿಸಿ ಪತ್ತಿನ ಸಹಕಾರ ಸಂಘವಾಗಿ ಪರಿವರ್ತಿಸಿಕೊಳ್ಳಲು ಸಾಕಷ್ಟು ಕಾಲಾವಕಾಶ ನೀಡಲಾಗಿತ್ತು. ಆದರೆ ಬ್ಯಾಂಕು ಪತ್ತಿನ ಸಹಕಾರ ಸಂಘವಾಗಿ ಪರಿವರ್ತಿಸಿಕೊಳ್ಳಲು ಯಾವುದೇ ಕ್ರಮವಿಡದೆ ಮತ್ತೆ ವಿನಾಕಾರ ಕಾಲಾವಕಾಶ ಕೋರಿದೆ. ಪದೇ ಪದೇ ಕಾಲಾವಕಾಶ ಕೋರಿ ಪತ್ರ ಬರೆಯುವುದನ್ನು ಬಿಟ್ಟು ಬೇರಾವುದೇ ಕ್ರಮ ಆಗಿರುವುದಿಲ್ಲ. ಆದ ಕಾರಣ ಉಲ್ಲೇಖ (3)ರ ಈ ಕಛೇರಿಯ ಆದೇಶದಲ್ಲಿ ಆದೇಶಿಸಿರುವಂತೆ ಈ ಸಂಸ್ಥೆಯನ್ನು ಮತ್ತೆ ಸಮಾಪನೆಗೊಳಿಸಲು ತೀರ್ಮಾನಿಸಿದೆ. ನಂತರದಲ್ಲಿ ಸರ್ವ ಸದಸ್ಯರ ಸಭೆ ಕರೆದು ಪತ್ತಿನ ಸಹಕಾರ ಸಂಘವಾಗಿ ಪರಿವರ್ತಿಸಿಕೊಳ್ಳಲು ಅಭಿಪ್ರಾಯ/ ತೀರ್ಮಾನ ತೆಗೆದುಕೊಂಡಲ್ಲಿ ಸಮಾಪನಾಧಿಕಾರಿಯವರು ಪ್ರಸ್ತಾವನೆ ಸಲ್ಲಿಸಲು ಸೂಚಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರಲ್ಲಿ ಸಹಕಾರ ಸಂಘಗಳ ನಿಬಂಧಕರಿಗೆ ದತ್ತವಾದ ಅಧಿಕಾರದಂತೆ ಧಾರವಾಡ ಇಂಡಸ್ಟ್ರಿಯಲ್ ಕೋ-ಆಪರೇಟಿವ್ ಬ್ಯಾಂಕ್ ಲಿ., ಹುಬ್ಬಳ್ಳಿ ಇದನ್ನು ಸಮಾಪನೆಗೊಳಿಸಿ ಕಲಂ 73(1)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಧಾರವಾಡ ಉಪವಿಭಾಗ ಇವರನ್ನು ಸಮಾಪನಾಧಿಕಾರಿಯನ್ನಾಗಿ ಹೆಚ್ಚುವರಿ ಪ್ರಭಾರದಲ್ಲಿ ನೇಮಿಸಲಾಗಿದೆ.

ಸಮಾಪನಾಧಿಕಾರಿಗಳು ಕೂಡಲೇ ಬ್ಯಾಂಕಿನ ಪ್ರಭಾರವನ್ನು ವಹಿಸಿಕೊಂಡು ಈ ಕಛೇರಿಗೆ ವರದಿ ಮಾಡುವುದು ಹಾಗೂ ಸಹಕಾರ ಸಂಘಗಳ ಕಾಯ್ದೆ, ನಿಯಮ ಮತ್ತು ಈ ಕಛೇರಿಯ ನಿರ್ದೇಶನ, ಸುತ್ತೋಲೆಗಳನುಸಾರವಾಗಿ ಬ್ಯಾಂಕಿನ ಆಸ್ತಿ-ಜವಾಬ್ದಾರಿಗಳ ವಿಲೇವಾರಿಗೆ ಕ್ರಮವಿಡತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ದಿನಾಂಕ:11.05.2009ರಂದು ಹೊರಡಿಸಿದೆ.

ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

ಪಿ.ಆರ್.425

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 11ನೇ ರಾಜಭವನ ರಸ್ತೆ, ಪಿ.ಬಿ.ನಂ.5309, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಕೃಮಾಇ/26/ಚುನಾವ/2005, ಬೆಂಗಳೂರು, ದಿನಾಂಕ:29/30ನೇ ಜೂನ್, 2009**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 11ರ ಉಪ ಪ್ರಕರಣ (1)(viii)ರನ್ವಯ ಗಂಗಾವತಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಕೃಮಾಇ/26/ಚುನಾವ/2005, ದಿನಾಂಕ:25.09.2007ರಲ್ಲಿ ಹಾಗೂ ಮಂಗಳೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಅಧಿಸೂಚನೆ ಸಂಖ್ಯೆ: ಕೃಮಾಇ/26/ಚುನಾವ/2005, ದಿನಾಂಕ:22.01.2008ರಲ್ಲಿ ಮಾಡಲಾಗಿದ್ದ ನಾಮನಿರ್ದೇಶನಗಳನ್ನು ಆಡಳಿತಾತ್ಮಕ ಹಿತದೃಷ್ಟಿಯಿಂದ ರದ್ದುಪಡಿಸುತ್ತ, ಸದರಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಕೆಳಕಂಡ ಅಧಿಕಾರಿಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಇಲಾಖಾ ಪ್ರತಿನಿಧಿ ಸದಸ್ಯರನ್ನಾಗಿ ನಾಮಕರಣ ಮಾಡಿದ್ದೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಸಮಿತಿಯ ಹೆಸರು | ಸದಸ್ಯರನ್ನಾಗಿ ನಾಮಕರಣ ಮಾಡಲಾಗಿರುವ ಅಧಿಕಾರಿ |
|---|---|---|---|
| 1. | ಕೊಪ್ಪಳ | ಗಂಗಾವತಿ | ಕಾರ್ಯದರ್ಶಿ,<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ರಾಯಚೂರು. |
| 2. | ದಕ್ಷಿಣ ಕನ್ನಡ | ಮಂಗಳೂರು | ಕಾರ್ಯದರ್ಶಿ,<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬೆಂಗಳೂರು. |

**ಜಿ. ರಾಮಚಂದ್ರ**
ನಿರ್ದೇಶಕರು.

ಪಿ.ಆರ್.591

**ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪವಿಭಾಗ-2, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ. ಆವರಣ, ಬೆಂಗಳೂರು-29**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ/ಬಿ2/ಎಫ್.ಸಿ./ಸಿಆರ್-31/2007, ದಿನಾಂಕ:13ನೇ ಜುಲೈ, 2009**

| **ಅರ್ಜಿದಾರರು** | | **ಪ್ರತಿವಾದಿಗಳು** |
|---|---|---|
| 1) ಶ್ರೀಮತಿ ನಸ್ರೀನ್ ಕೋಂ ಲೇ. ಮೊಹಮ್ಮದ್ ಬಾಬು @ ಬಾಬು (36 ವರ್ಷ)<br>2) ರೇಷ್ಮಾ ಬಿನ್ ಲೇ. ಮೊಹಮ್ಮದ್ ಬಾಬು @ ಬಾಬು (15 ವರ್ಷ) | **ವಿರುದ್ಧ** | 1) ಮೆ: ಶರ್ಮ ಟ್ರಾನ್ಸ್‌ಪೋರ್ಟ್ಸ್, ನಂ.328, ಸಂಗೀತ ಭವನ, ಬಿಎಸ್‌ಪಿ ರಸ್ತೆ, ಕಲಾಸಿಪಾಳ್ಯಂ, ಬೆಂಗಳೂರು-2.<br>2) ದಿ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ.,10/1, 1ನೇ ಮಹಡಿ, 3ನೇ ಕ್ರಾಸ್, ಚಿಕ್ಕಣ್ಣ ಗಾರ್ಡನ್, ಶಂಕರಮಠ, ಕಾಂಪೌಂಡ್, ಚಾಮರಾಜಪೇಟೆ, ಬೆಂಗಳೂರು-4. |

3) ಅಸ್ಮಾ ಬಿನ್ ಲೇ. ಮೊಹಮ್ಮದ್ ಬಾಬು @ ಬಾಬು (13 ವರ್ಷ)

4) ಮಾಸ್ಟರ್ ವಾಸಿಂ ಪಾಷ ಬಿನ್ ಲೇ. ಮೊಹಮ್ಮದ್ ಬಾಬು @ ಬಾಬು (11 ವರ್ಷ)

ವಿಳಾಸ: ನಂ.5, 3ನೇ ಕ್ರಾಸ್, ಗುಡ್ಡದಹಳ್ಳಿ, ಶಾಮಣ್ಣನಗರ, ಮೈಸೂರು ರಸ್ತೆ, ಬೆಂಗಳೂರು–26.

3) ಗುಲ್‌ಶೀರ್ ಉನ್ನೀಸಾ ಕೋಂ ಲೇ. ಬಾಬು @ ಮೊಹಮ್ಮದ್ ಬಾಬು (39 ವರ್ಷ)

4) ಮುಜಾಹಿದ್ ಪಾಷ ಬಿನ್ ಬಾಬು @ ಮೊಹಮ್ಮದ್ ಬಾಬು (17 ವರ್ಷ)

5) ರಫಿಯಾ ಬಾನು ಬಿನ್ ಬಾಬು @ ಮೊಹಮ್ಮದ್ ಬಾಬು (16 ವರ್ಷ)

6) ಫಸಿಯಾ ತಬಸುಮ್ @ ಪನೀರ ಬಿನ್ ಬಾಬು @ ಮೊಹಮ್ಮದ್ ಬಾಬು (13 ವರ್ಷ)

ವಿಳಾಸ: 3 ರಿಂದ 6: ನಂ.91, ಕಂಟಿಪುರ, ಕುಂಬಳಗೋಡು ಪೋಸ್ಟ್, ಬೆಂಗಳೂರು.

**ಪ್ರಕಟಣೆ**

ಅರ್ಜಿದಾರರಾದ ನಸ್ರೀನ್, ರೇಷ್ಮಾ, ಅಸ್ಮಾ, ವಾಸಿಂ ಪಾಷ ಮತ್ತು ಪ್ರತಿವಾದಿಗಳಾದ ಗುಲ್‌ಶೀರ್ ಉನ್ನೀಸಾ, ಮುಜಾಹಿದ್ ಪಾಷ, ರಫಿಯಾ, ಫಸಿಯಾ ತಬಸುಮ್ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಮೊಹಮ್ಮದ್ ಬಾಬು @ ಬಾಬು ಇವರು ಪ್ರತಿವಾದಿ–1 ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೇ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ಪರಿಹಾರ ಆಯುಕ್ತರು,
ಉಪವಿಭಾಗ–2, ಬೆಂಗಳೂರು.

ಪಿ.ಆರ್.647

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆಯಡಿ ನಿಯಂತ್ರಣಾಧಿಕಾರಿಯವರ ನ್ಯಾಯಾಲಯ, ವಿಭಾಗ–4, ಬೆಂಗಳೂರು**

**ಸಂಖ್ಯೆ:ಪಿಜಿಎ/ಎಸ್.ಆರ್–77/2007–08**

**ಅರ್ಜಿದಾರರು**

ಶ್ರೀಮತಿ ಲಕ್ಷ್ಮಮ್ಮ ಕೋಂ ಲೇಟ್ ಚಿಕ್ಕಣ್ಣ, ನಂ.143, ಯಲಚೇನಹಳ್ಳಿ ಜೆ.ಪಿ.ನಗರ ಅಂಚೆ, ಕನಕಪುರ ಮುಖ್ಯ ರಸ್ತೆ, ಬೆಂಗಳೂರು–78.

**ವಿರುದ್ಧ**

**ಪ್ರತಿವಾದಿಗಳು**

ದಿ ಕಂಟ್ರೋಲರ್, ಪ್ರಿಂಟಿಂಗ್ & ಸ್ಟೇಷನರಿ, ಪ್ರಿಂಟಿಂಗ್ ಪ್ರೆಸ್, ಕೆ.ಎಸ್.ಆರ್.ಟಿ.ಸಿ. ಸೆಂಟ್ರಲ್ ಆಫೀಸ್, ಕೆ.ಹೆಚ್. ರಸ್ತೆ, ಶಾಂತಿನಗರ, ಬೆಂಗಳೂರು–27.

**ಪ್ರಕಟಣೆ**

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೇಲ್ಕಂಡ ಅರ್ಜಿದಾರರು ಈ ನ್ಯಾಯಾಲಯದಲ್ಲಿ ದಿನಾಂಕ:17.05.2007ರಂದು ಉಪಧನ ಪಾವತಿ ಕಾಯ್ದೆಯಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ, ಅವರ ಪತಿ ಲೇಟ್ ಚಿಕ್ಕಣ್ಣ ಇವರು ಪ್ರತಿವಾದಿ ಸಂಸ್ಥೆಯಲ್ಲಿ ತಮ್ಮ 28 ವರ್ಷ, 06 ತಿಂಗಳು, 11 ದಿನಗಳ ಕಾಲ ಸೇವೆ ಸಲ್ಲಿಸಿ, ದಿನಾಂಕ:31.05.1996 ರಂದು ಸೇವೆಯಿಂದ ನಿವೃತ್ತಿ ಹೊಂದಿ, ತದನಂತರ ದಿನಾಂಕ:17.02.2003 ರಂದು ಮರಣ ಹೊಂದಿದ್ದಾರೆಂದು ತಿಳಿಸಿ, ಪ್ರತಿವಾದಿಗಳಿಂದ ಕಾನೂನು ರೀತ್ಯಾ ಬರಬೇಕಾದ ವ್ಯತ್ಯಾಸದ ಉಪಧನವನ್ನು ಕೊಡಿಸಿಕೊಡಬೇಕೆಂದು ಕೋರಿರುತ್ತಾರೆ.

ಸದರಿ ದಾವೆಯ ವಿಚಾರಣೆ ನಡೆಯುತ್ತಿದ್ದು, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ ಮೇಲೆ ಸೂಚಿಸಿರುವ ಅರ್ಜಿಯನ್ನು ಹೊರತುಪಡಿಸಿ (ಜೀವಂತ ಸದಸ್ಯರು) ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ

ವಾರಸುದಾರರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ ಅಂತಹವರು ಈ ಪ್ರಕಟಣೆಯನ್ನು ರಾಜ್ಯಪತ್ರದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ದಿನಾಂಕ:15.07.2009

**ಎ.ಹೆಚ್. ಉಮೇಶ**

ಸಹಾಯಕ ಕಾರ್ಮಿಕ ಆಯುಕ್ತರು ಮತ್ತು
ನಿಯಂತ್ರಣಾಧಿಕಾರಿಗಳು, ಉಪಧನ ಪಾವತಿ
ಕಾಯ್ದೆ, ವಿಭಾಗ–4, ಬೆಂಗಳೂರು.

ಪಿ.ಆರ್.648

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರ ನಡವಳಿಗಳು

**ಕ್ರ.ಸಂ.ಜೆಆರ್‌ಬಿ:ಸಮಾಪನೆ:10:2008–09, ದಿನಾಂಕ:13ನೇ ಮಾರ್ಚ್, 2009**

**ವಿಷಯ:** ಸಮಾಪನೆಯಲ್ಲಿರುವ ಚಿತ್ರದುರ್ಗ ತಾಲ್ಲೂಕು ಸಣ್ಣ ಮತ್ತು ಅತಿ ಸಣ್ಣ ರೈತರ ಸಾಮೂಹಿಕ ಏತ ನೀರಾವರಿ ಸಹಕಾರ ಸಂಘ ನಿ., ಚಿತ್ರದುರ್ಗ ತಾಲ್ಲೂಕು ಇದರ ನೊಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:**1) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಜೆಆರ್‌ಬಿ/ಸಮಾಪನೆ/ 10/98–99, ದಿನಾಂಕ:01.08.1998.
2) ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂಖ್ಯೆ: ಡಿಆರ್‌ಡಿ/ ಎಲ್‌ಕ್ಯೂಡಿ/ಸಿಆರ್–32/ 2003–04, ದಿನಾಂಕ:23.02.2005.

**ಪ್ರಸ್ತಾವನೆ:**

ಚಿತ್ರದುರ್ಗ ತಾಲ್ಲೂಕು ಸಣ್ಣ ಮತ್ತು ಅತಿ ಸಣ್ಣ ರೈತರ ಸಾಮೂಹಿಕ ಏತ ನೀರಾವರಿ ಸಹಕಾರ ಸಂಘ ನಿ., ಚಿತ್ರದುರ್ಗ ತಾಲ್ಲೂಕು, ಈ ಸಹಕಾರ ಸಂಘವು ನೊಂದಣಿ ಸಂಖ್ಯೆ: ಡಿಆರ್‌ಡಿ/ ಎಸ್‌ಇಬಿ/ ಆರ್‌ಸಿಎಸ್/81–82, ದಿನಾಂಕ:02.01.1982 ರಲ್ಲಿ ನೊಂದಣಿಯಾಗಿದ್ದು, ಈ ಸಂಘವು ಸಾಮೂಹಿಕ ಬೇಸಾಯಕ್ಕೆ ಸಂಬಂಧಿಸಿದಂತೆ ಸಂಘದ ವ್ಯಾಪ್ತಿಯಲ್ಲಿ ಬರುವ ಸದಸ್ಯರ ರೈತರ ಜಮೀನುಗಳಲ್ಲಿ ಕೊರೆಸಿದ ಕೊಳವೆಬಾವಿ ಹಾಗೂ ಪಂಪ್ ಸೆಟ್ ಮೋಟಾರ್‌ಗಳನ್ನು ಬರಗಾಲ ಪೀಡಿತ ಅಭಿವೃದ್ಧಿ ಯೋಜನಾವತಿಯಿಂದ ಅನುದಾನ ರೂಪದಲ್ಲಿ ಅನುದಾನ ನೀಡಲಾಗಿರುತ್ತದೆ. ಕಾಲಕ್ರಮೇಣ ಜಿಲ್ಲೆಯಲ್ಲಿ ಮಳೆ ಕಡಿಮೆಯಾಗಿ ಅಂತರ್ಜಲ ಕೊರತೆಯಿಂದಾಗಿ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿದ್ದರಿಂದ ಮೇಲ್ಕಂಡ ಸಹಕಾರ ಸಂಘವನ್ನು ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಲಾಗಿತ್ತು. ಸಂಘವು, ತೀರಿಸತಕ್ಕ ಜವಾಬ್ದಾರಿಗಳನ್ನು ತೀರಿಸಲಾಗದ ಸ್ಥಿತಿಗೆ ಬಂದಿದ್ದು, ಸಮಾಪನಾಧಿಕಾರಿಗಳು ಸಂಘದ ಸದಸ್ಯರುಗಳಿಗೆ ಸಂಘದ ಪುನಃಶ್ಚೇತನಕ್ಕೆ ಒಲವು ಇಲ್ಲದಿರುವುದನ್ನು ಮನಗಂಡು ದಿನಾಂಕ:09.02.2005 ರಂದು ನಡೆಸಿದ ಸಮಾಪನಾಧಿಕಾರಿಯವರ ಸಭಾ ನಡವಳಿಕೆ ರೀತ್ಯಾ ಬರತಕ್ಕ ಆಸ್ತಿಗಳನ್ನು ನಷ್ಟಕ್ಕೆ ವರ್ಗಾಯಿಸಿ ತೀರಿಸತಕ್ಕ ಜವಾಬ್ದಾರಿಗಳನ್ನು ಹೊಂದಾಣಿಕೆ ಮೂಲಕ ಶೂನ್ಯಗೊಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಂಘವನ್ನು ಯಥಾಸ್ಥಿತಿಯಲ್ಲಿ ಮುಂದುವರೆಸಿದಲ್ಲಿ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನ ಇಲ್ಲವೆಂದು ಪರಿಗಣಿಸಿ, ಆಸ್ತಿ–ಜವಾಬ್ದಾರಿ ತಃಖ್ತೆಯನ್ನು ಶೂನ್ಯಗೊಳಿಸಿ ಸಂಘದ ನೊಂದಣಿಯನ್ನು ರದ್ದುಗೊಳಿಸಲು ಸಮಾಪನಾಧಿಕಾರಿಗಳು ಸಲ್ಲಿಸಿರುವ ಪ್ರಸ್ತಾವನೆಯನ್ನು ಉಲ್ಲೇಖ (2)ರ ಪತ್ರದಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಇವರು ಸದರಿ ಸಂಘವನ್ನು ರದ್ದುಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಕಾರಣಗಳಿಂದ ಹಾಗೂ ಉಪನಿಬಂಧಕರ ವರದಿಯ ಮೇರೆಗೆ ಸಂಘವನ್ನು ಮುಂದುವರೆಸುವುದು ಸೂಕ್ತವಲ್ಲವೆಂದು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2001, ದಿನಾಂಕ:21.11.2001 ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸಿ.ಎಸ್. ವೀರೇಶ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ಚಿತ್ರದುರ್ಗ ತಾಲ್ಲೂಕು ಸಣ್ಣ ಮತ್ತು ಅತಿ ಸಣ್ಣ ರೈತರ ಸಾಮೂಹಿಕ ಏತ ನೀರಾವರಿ ಸಹಕಾರ ಸಂಘ ನಿ., ಚಿತ್ರದುರ್ಗ ತಾಲ್ಲೂಕು ಈ ಸಂಘದ ನೊಂದಣಿ ಸಂಖ್ಯೆ: ಡಿಆರ್‌ಡಿ/ಎಸ್‌ಇಬಿ/ಆರ್‌ಸಿಎಸ್/7607/81–82 ಅನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿರುತ್ತೇನೆ. ಈ ದಿನದಿಂದ ಸದರಿ ಸಂಘವು ಕಾರ್ಪೋರೇಟ್ ಬಾಡಿಯಾಗಿರುವ ಅಸ್ತಿತ್ವವನ್ನು ಕಳೆದುಕೊಂಡಿರುತ್ತದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:13.03.2009ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್.280

**ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ**

**ಸಂಖ್ಯೆ: ಆಸಾನಿ/184/ಆಡಳಿತ–1/2008–09, ಬೆಂಗಳೂರು, ದಿನಾಂಕ:15ನೇ ಜೂನ್, 2009**

**ವಿಷಯ:** ಈ ನಿರ್ದೇಶನಾಲಯದ ಸಹಾಯಕ ನಿರ್ದೇಶಕ ಸಮೂಹ 'ಬಿ' ವೃಂದದ ಅಧಿಕಾರಿಗಳಾದ ಶ್ರೀ ಎ.ಕೆ. ಹನುಮಂತಪ್ಪ, ತಾಲ್ಲೂಕು ಯೋಜನಾಧಿಕಾರಿಗಳು, ತಾಲ್ಲೂಕು ಪಂಚಾಯತ್ ಸಮಿತಿ, ಶಿಕಾರಿಪುರ, ಶಿವಮೊಗ್ಗ ಜಿಲ್ಲೆ, ಪ್ರಸ್ತುತ ಅನ್ಯ ಕರ್ತವ್ಯದ ಮೇಲೆ ಜಿಲ್ಲಾ ಪಂಚಾಯತಿ ಶಿವಮೊಗ್ಗ ಇವರ ವಿರುದ್ಧ "ಇಲಾಖಾ ವಿಚಾರಣೆ ಏರ್ಪಡಿಸುವ ಕುರಿತು ವಿಚಾರಣಾಧಿಕಾರಿಗಳನ್ನು ನೇಮಿಸುವ ಕುರಿತು.

**ಉಲ್ಲೇಖ:** 1) ಶ್ರೀ ಎ.ಕೆ. ಹನುಮಂತಪ್ಪ, ಸಹಾಯಕ ನಿರ್ದೇಶಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 11ರ ಅಡಿಯಲ್ಲಿ ಹೊರಡಿಸಲಾದ ಇದೇ ಕ್ರಮಾಂಕದ ಕಾರಣ ಕೇಳುವ ಜ್ಞಾಪನ ದಿನಾಂಕ: 24.03.2009

2) ಶ್ರೀ ಎ.ಕೆ. ಹನುಮಂತಪ್ಪ, ಸಹಾಯಕ ನಿರ್ದೇಶಕರು, ಇವರು ಸಲ್ಲಿಸಿದ ಲಿಖಿತ ವಿವರಣೆ ದಿನಾಂಕ: 28.05.2009.

**ಪ್ರಸ್ತಾವನೆ:**

ಶ್ರೀ ಎ.ಕೆ. ಹನುಮಂತಪ್ಪ, ಈ ನಿರ್ದೇಶನಾಲಯದ ಸಹಾಯಕ ನಿರ್ದೇಶಕರ ವೃಂದದ ಸಮೂಹ 'ಬಿ' ಅಧಿಕಾರಿಗಳು, ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಛೇರಿ, ಶಿವಮೊಗ್ಗ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ **"ದಿನಾಂಕ: 20.08.2004ರಂದು"** ನೇರವಾಗಿ ಸರ್ಕಾರಕ್ಕೆ ಸಲ್ಲಿಸಿದ್ದ ಅವರ ವರ್ಗಾವಣೆ ಅರ್ಜಿಯಲ್ಲಿ **"ನನ್ನ ವೈಯಕ್ತಿಕ ಸಮಸ್ಯೆಯಿಂದಾಗಿ ಮತ್ತು ನನ್ನ ಸ್ನೇಹಿತನಾದ ಎನ್. ವಾಸುದೇವ ಸಹಾಯಕ ನಿರ್ದೇಶಕರು (ಸಾಂಖ್ಯಿಕ ಅಧಿಕಾರಿ), ಜಿಲ್ಲಾ ಪಂಚಾಯತ್, ಯೋಜನಾ ಶಾಖೆ, ಚಿಕ್ಕಮಗಳೂರು, ಇವರು ಆರೋಗ್ಯ ಸಮಸ್ಯೆಯಿಂದ ಬಳಲುತ್ತಿದ್ದು, ಅವರಿಗೆ ನೆರವು ನೀಡುವ ಉದ್ದೇಶದಿಂದ ನಾವುಗಳು ಇಬ್ಬರು ಪರಸ್ಪರ (ಮ್ಯೂಚುಯಲ್) ವರ್ಗಾವಣೆ ಮಾಡಿಕೊಳ್ಳಲು ನಾನು ಮನಸ್ಸು ಪೂರ್ವಕವಾಗಿ ಒಪ್ಪಿಕೊಂಡಿದ್ದು ನನ್ನ ಮನವಿಯನ್ನು ಪುರಸ್ಕರಿಸಿ ಪರಸ್ಪರ ವರ್ಗಾವಣೆ ಮಾಡಿಕೊಡಬೇಕೆಂದು ಪ್ರಾರ್ಥಿಸುತ್ತೇನೆ"** ಎಂದು ನಮೂದಿಸಿ ಅವರನ್ನು ಜಿಲ್ಲಾ ಪಂಚಾಯಿತಿ ಚಿಕ್ಕಮಗಳೂರು ಇಲ್ಲಿಗೆ ವರ್ಗಾವಣೆ ಮಾಡುವಂತೆ ಕೋರಿದ್ದರು. (ಅವರ ಈ ಅರ್ಜಿಯಲ್ಲಿ ಅನುಬಂಧ–'ಎ'ರಲ್ಲಿದೆ). ಅವರ ಈ ಕೋರಿಕೆಯನ್ನು ಪುಷ್ಠೀಕರಿಸಲು (in support of representation dated 20.08.2004 of Sri. A.K. Hanumanthappa) ಶ್ರೀ ಎನ್. ವಾಸುದೇವ, ಸಹಾಯಕ ನಿರ್ದೇಶಕರು (ಸಾಂಖ್ಯಿಕ ಅಧಿಕಾರಿಗಳು) ಜಿಲ್ಲಾ ಪಂಚಾಯಿತಿ, ಚಿಕ್ಕಮಗಳೂರು ಇವರು ದಿನಾಂಕ:03.09.2004ರಂದು ನೇರವಾಗಿ ಸರ್ಕಾರಕ್ಕೆ ಸಲ್ಲಿಸಿದ್ದ ಅವರ ಮನವಿಯಲ್ಲಿ ಅವರ ತಂದೆಯವರ ಮತ್ತು ಸ್ವತಃ ಅವರು ಸಕ್ಕರೆ ಕಾಯಿಲೆ ಹಾಗೂ ರಕ್ತದೊತ್ತಡದಿಂದ ಬಳಲುತ್ತಿದ್ದು, ಅವರನ್ನು ಶಿವಮೊಗ್ಗ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಛೇರಿಯ ಶ್ರೀ ಎ.ಕೆ. ಹನುಮಂತಪ್ಪ, ಸಹಾಯಕ ನಿರ್ದೇಶಕರು ಇವರ ಸ್ಥಳಕ್ಕೆ **"ಪರಸ್ಪರ ವರ್ಗಾವಣೆ"** ಎಂದು ಪರಿಗಣಿಸಿ ವರ್ಗಾವಣೆ ಮಾಡುವಂತೆ ಕೋರಿದ್ದರು.

(ಶ್ರೀ ಎನ್. ವಾಸುದೇವ, ಸಹಾಯಕ ನಿರ್ದೇಶಕರು, ದಿನಾಂಕ: 03.09.2004ರಂದು ಸಲ್ಲಿಸಿದ್ದ ಅವರ ಅರ್ಜಿ ಮತ್ತು ಅದಕ್ಕೆ ಲಗತ್ತಿಸಲಾದ ಅವರ ಮತ್ತು ಅವರ ತಂದೆಯವರ ವೈದ್ಯಕೀಯ ಪ್ರಮಾಣ ಪತ್ರಗಳನ್ನು (**ಅನುಬಂಧ–ಬಿ, ಸಿ ಮತ್ತು ಡಿ ಯಲ್ಲಿ ಒದಗಿಸಲಾಗಿದೆ**).

ಮೇಲೆ ವಿವರಿಸಿದಂತೆ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಛೇರಿ, ಶಿವಮೊಗ್ಗ ಜಿಲ್ಲೆ ಇಲ್ಲಿ ಸಹಾಯಕ ನಿರ್ದೇಶಕರಾಗಿದ್ದ ಶ್ರೀ ಎ.ಕೆ. ಹನುಮಂತಪ್ಪ, ಇವರ ಅರ್ಜಿ ದಿನಾಂಕ: 20.08.2004ನ್ನು (ಅನುಬಂಧ–ಎ) ಜಿಲ್ಲಾ ಪಂಚಾಯತ್, ಚಿಕ್ಕಮಗಳೂರು ಇಲ್ಲಿ ಸಹಾಯಕ ನಿರ್ದೇಶಕರ ವೃಂದದ ಸಾಂಖ್ಯಿಕ ಅಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀ ಎನ್. ವಾಸುದೇವ ಇವರ ಅರ್ಜಿ ದಿನಾಂಕ: 03.09.2004ನ್ನು (**ಅನುಬಂಧ–ಬಿ ರಿಂದ ಡಿ ವರೆಗೆ**) – ಅಂದರೆ ಇವರುಗಳು ಪರಸ್ಪರ ವರ್ಗಾವಣೆಗಾಗಿ ಸಲ್ಲಿಸಿದ್ದ ಅರ್ಜಿಗಳನ್ನು ಪರಿಗಣಿಸಿ 2004–05ನೇ ಸಾಲಿನ ವರ್ಗಾವಣೆಗಳಿಗೆ ಸಂಬಂಧಿಸಿದಂತೆ ಹೊರಡಿಸಲಾದ ಮಾರ್ಗಸೂಚಿಗಳ ಅನ್ವಯ ಈ ನಿರ್ದೇಶನಾಲಯದ ಆದೇಶದ ಸಂಖ್ಯೆ: ಆಡಳಿತ/273/2004–05 ದಿನಾಂಕ: 30.09.2004ರಲ್ಲಿ ಶ್ರೀ ಎ.ಕೆ. ಹನುಮಂತಪ್ಪ ಮತ್ತು ಶ್ರೀ ಎನ್. ವಾಸುದೇವ, ಸಹಾಯಕ ನಿರ್ದೇಶಕರುಗಳನ್ನು (ಇನ್ನಿತರ 6 ಸಹಾಯಕ ನಿರ್ದೇಶಕರುಗಳ ಸಹಿತವಾಗಿ) ಪರಸ್ಪರ ವರ್ಗಾವಣೆ ಮಾಡಲಾಗಿತ್ತು. ಈ ವರ್ಗಾವಣೆ ಆದೇಶದ ದಿನಾಂಕ: 30.09.2004ನ್ನು **"ಅನುಬಂಧ–ಇ"** ಯನ್ನು ಒದಗಿಸಲಾಗಿದೆ.

ಮೇಲಿನ ವರ್ಗಾವಣೆ ಆದೇಶದ ದಿನಾಂಕ:30.09.2004ರ ಅನ್ವಯ ಅವರ ಸ್ವಂತ ಕೋರಿಕೆಯ ಅನ್ವಯ ವರ್ಗಾವಣೆ ಆದೇಶದಲ್ಲಿದ್ದ ಶ್ರೀ ಎ.ಕೆ. ಹನುಮಂತಪ್ಪ, ಸಹಾಯಕ ನಿರ್ದೇಶಕರು, ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಛೇರಿ, ಶಿವಮೊಗ್ಗ ಇವರನ್ನು ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳು, ಶಿವಮೊಗ್ಗ ಇವರ ಕಛೇರಿ ಆದೇಶದ ಸಂಖ್ಯೆ: ಆಡಳಿತ/39/2004–05

ದಿನಾಂಕ: 14.10.2004ರಲ್ಲಿ (**ಅನುಬಂಧ– ಎಫ್**) ಬಿಡುಗಡೆಗೊಳಿಸಲಾಗಿತ್ತಾದ್ದರಿಂದ ಸ್ವಂತ ಕೋರಿಕೆ ಅನ್ವಯ ವರ್ಗಾವಣೆ ಹೊಂದಿದ್ದ ಶ್ರೀ ಎ.ಕೆ. ಹನುಮಂತಪ್ಪ, ಸಹಾಯಕ ನಿರ್ದೇಶಕರು, ಬಿಡುಗಡೆ ಹೊಂದಿದ ತಕ್ಷಣ ಅಥವಾ ಮಾರನೇಯ ದಿನ ವರ್ಗಾವಣೆ ಹೊಂದಿದ್ದ ಕಛೇರಿಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳತಕ್ಕದ್ದಾಗಿತ್ತಾದರೂ ಶ್ರೀ ಎ.ಕೆ. ಹನುಮಂತಪ್ಪ, ಸಹಾಯಕ ನಿರ್ದೇಶಕರು, ಬಿಡುಗಡೆಹೊಂದಿದ ದಿನಾಂಕ:14.10.2004ರ ತಕ್ಷಣದ ಮಾರನೇಯ ದಿನ (immediate next day) ಅಂದರೆ ದಿನಾಂಕ: 15.10.2004ರಂದೇ ವರ್ಗಾವಣೆ ಹೊಂದಿದ್ದ ಚಿಕ್ಕಮಗಳೂರು ಜಿಲ್ಲಾ ಪಂಚಾಯತಿಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೇ ದಿನಾಂಕ:03.09.2005ರಂದು (ಅಂದರೆ 10 (ಹತ್ತು) ತಿಂಗಳಿಗಿಂತ ಹೆಚ್ಚಿನ ಅವಧಿಯ ಗೈರು ಹಾಜರಿ ನಂತರ) ದಿನಾಂಕ:02.09.2005ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿದ್ದರಿಂದ ಇವರ ಗೈರು ಹಾಜರಾತಿಯು ಉದ್ದೇಶಪೂರ್ವಕ ಅನಧಿಕೃತ ಗೈರುಹಾಜರಿ ಎಂದು ಮೇಲ್ನೋಟಕ್ಕೆ ಕಂಡು ಬಂದಿದ್ದರಿಂದ ಅವರ ವಿರುದ್ಧದ ಗೈರು ಹಾಜರಾತಿ ಹಾಗೂ ಇನ್ನಿತರ ಆರೋಪಗಳಿಗೆ ಸಂಬಂಧಿಸಿದಂತೆ ಅವರ ವಿರುದ್ಧ ಉದ್ದೇಶಿಸಲಾದ ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ ಉಲ್ಲೇಖ(1) ರಲ್ಲಿನ ಕಾರಣ ಕೇಳುವ ಜ್ಞಾಪನವನ್ನು ಹೊರಡಿಸಿ ಅವರ **"ಲಿಖಿತ ಹೇಳಿಕೆ"**ಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

ಆಪಾದಿತ ಸರ್ಕಾರಿ ಅಧಿಕಾರಿಗಳಾದ ಶ್ರೀ ಎ.ಕೆ. ಹನುಮಂತಪ್ಪ, ಅವರು ಉಲ್ಲೇಖ(2)ರಲ್ಲಿ ಸಲ್ಲಿಸಲಾದ ಅವರ ಲಿಖಿತ ವಿವರಣೆ ದಿನಾಂಕ: 28.05.2005ರಲ್ಲಿ ಅವರ ದಿನಾಂಕ: 15.10.2004ರಿಂದ ದಿನಾಂಕ: 02.09.2005ರ ವರೆಗಿನ ಅವರ ಗೈರು ಹಾಜರಾತಿಯನ್ನು ಸಮರ್ಥಿಸಿಕೊಂಡಿದ್ದು, ಅವರ ವಿರುದ್ಧದ ಆರೋಪಗಳನ್ನು ಸ್ಪಷ್ಟವಾಗಿ ನಿರಾಕರಿಸಿರುತ್ತಾರೆ ಹಾಗೂ ಅವರ ವಿವರಣೆಯಲ್ಲಿನ ಅಂಶಗಳು ಅವರ ವಿರುದ್ಧದ ಆಪಾದನೆಗಳನ್ನು ಸಮರ್ಥಿಸಿಕೊಳ್ಳಲು ಅಸಮರ್ಪಕವಾಗಿರುತ್ತವೆ. ಆದ್ದರಿಂದ ಅವರ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಅವರ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸುವುದು ಸೂಕ್ತವೆಂಬ ಕಾರಣದಿಂದ ವಿಚಾರಣಾಧಿಕಾರಿಗಳನ್ನು ನೇಮಕಾತಿ ಮಾಡುವುದು ಅಗತ್ಯವಾಗಿರುತ್ತದೆ.

ಸದರಿ ಶ್ರೀ ಎ.ಕೆ. ಹನುಮಂತಪ್ಪ, ಸಹಾಯಕ ನಿರ್ದೇಶಕರು, ಇವರ ವಿರುದ್ಧ ಹೊರಿಸಲಾದ ಆರೋಪಗಳು ಹಾಗೂ ಅವುಗಳಿಗೆ ಸಂಬಂಧಿಸಿದಂತೆ ಸದರಿ ಅವರು ಸಲ್ಲಿಸಿದ ವಿವರಣೆಯಲ್ಲಿನ ಅಂಶಗಳನ್ನು ಈ ಕೆಳಗೆ ವಿಶ್ಲೇಷಿಸಲಾಗಿದೆ ಹಾಗೂ ಅವರ ವಿವರಣೆಯನ್ನು ಯಾವ ಕಾರಣದಿಂದ ಒಪ್ಪಲಾಗುವುದಿಲ್ಲವೆಂದು ಸ್ಪಷ್ಟೀಕರಿಸಲಾಗಿದೆ.

**(ಎ) ಆರೋಪ: 1**

ಈ ನಿರ್ದೇಶನಾಲಯದ ಸಹಾಯಕ ನಿರ್ದೇಶಕರ ವೃಂದದ (ಗ್ರೂಪ್ 'ಬಿ') ಅಧಿಕಾರಿಗಳಾದ ಶ್ರೀ ಎ.ಕೆ. ಹನುಮಂತಪ್ಪ, ಆದ ನೀವು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಶಿವಮೊಗ್ಗ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ನಿಮ್ಮನ್ನು **ನಿಮ್ಮ ಸ್ವಂತ ಕೋರಿಕೆ ದಿನಾಂಕ: 20.08.2004ರ ಅನ್ವಯ,** ಜಿಲ್ಲಾ ಪಂಚಾಯಿತಿ, ಚಿಕ್ಕಮಗಳೂರು (ಇಲ್ಲಿನ ಸಾಂಖ್ಯಿಕ ಅಧಿಕಾರಿ ಹುದ್ದೆಗೆ) ಇಲ್ಲಿಗೆ ಈ ನಿರ್ದೇಶನಾಲಯದ ಆದೇಶದ ಸಂಖ್ಯೆ:ಆಡಳಿತ/273/2004–05 ದಿನಾಂಕ:03.09.2004ರಲ್ಲಿ ವರ್ಗಾವಣೆ ಮಾಡಲಾಗಿತ್ತು. ಹಾಗೂ ಈ ಆದೇಶದ ಅನ್ವಯ ನಿಮ್ಮನ್ನು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರ ಕಛೇರಿಯಿಂದ **ದಿನಾಂಕ:14.10.2004ರ ಆದೇಶ ಸಂಖ್ಯೆ: ಆಡಳಿತ/39/2004–05 ದಿನಾಂಕ: 14.10.2004ರಲ್ಲಿ** ಬಿಡುಗಡೆಗೊಳಿಸಲಾಗಿತ್ತು. ಹಾಗೂ ಅದೇ ಆದೇಶದ ಅನ್ವಯ ವರ್ಗಾವಣೆ ಹೊಂದಿದ ಕಛೇರಿಯಲ್ಲಿ ಮಾರನೇಯ ದಿನ ಅಂದರೆ ದಿನಾಂಕ: 15.10.2004ರಂದು ಕರ್ತವ್ಯಕ್ಕೆ ವರದಿ ಮಾಡತಕ್ಕದ್ದಾಗಿತ್ತಾದರೂ, ವರ್ಗಾವಣೆ ಹೊಂದಿದ ಕಛೇರಿಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ **ದೀರ್ಘಾವಧಿಯವರೆಗೆ ಅನಧಿಕೃತ ಗೈರು ಹಾಜರಾಗಿ ದಿನಾಂಕ:03.09.2005ರಂದು** ಚಿಕ್ಕಮಗಳೂರು ಜಿಲ್ಲಾ ಪಂಚಾಯತ್ ಕಛೇರಿಯಲ್ಲಿ ವರದಿ ಮಾಡಿಕೊಂಡಿರುತ್ತೀರಿ.

ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ ನಿಯಮ 76(3)ರ ಅನ್ವಯ **"**ಸ್ವಂತ ಕೋರಿಕೆ ಮೇರೆಗೆ ಅಂತಹ ವರ್ಗಾವಣೆಯಾದ ದಿನಾಂಕದಂದು ಅವನು ಹೊಂದಿದ ಮತ್ತು ಪಡೆಯಬಹುದಾದ ಯಾವುದೇ ಬಗೆಯ ರಜೆಯನ್ನು ಅವರಿಗೆ ನೀಡಬಹುದಾದ ಸೇರಿಕೆ ಕಾಲದ ಅವಧಿಯನ್ನು ಮೀರದ ಅವಧಿಗೆ ಮಾತ್ರ ಮಂಜೂರು ಮಾಡಬಹುದಾದ್ದರಿಂದ**"** ಮೇಲೆ ತಿಳಿಸಲಾದ ಆದೇಶದಲ್ಲಿ ನಿಮ್ಮ ಕೋರಿಕೆ ಅನ್ವಯ ನಿಮ್ಮನ್ನು ಚಿಕ್ಕಮಗಳೂರು ಜಿಲ್ಲಾ ಪಂಚಾಯಿತಿಗೆ ವರ್ಗಾವಣೆ ಮಾಡಲಾಗಿತ್ತಾದ್ದರಿಂದ, ವರ್ಗಾವಣೆಯಾದ ಸ್ಥಳದಲ್ಲಿ/ಕಛೇರಿಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ದೀರ್ಘಾವಧಿಯವರೆಗೆ ಅಂದರೆ 326 ದಿನಗಳಷ್ಟು, ಅನಧಿಕೃತ ಗೈರುಹಾಜರಾಗಿ ಮೇಲಿನ ನಿಯಮಗಳ ನಿಯಮ:76(3)ಗೆ ವಿರುದ್ಧವಾಗಿ ವರ್ತಿಸಿದ್ದಲ್ಲದೆ ಕರ್ನಾಟಕ ನಾಗರೀಕ ಸೇವಾ(ನಡತೆ) ನಿಯಮಗಳು 1966ರ ನಿಯಮ 3ನ್ನು ಉಲ್ಲಂಘಿಸಿರುವುದು ಮೇಲ್ನೋಟಕ್ಕೆ ಸಾಬೀತಾಗಿದ್ದರಿಂದ ನಿಮ್ಮ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸಲು ಉದ್ದೇಶಿಸಲಾಗಿದೆ.

**ಆರೋಪ: 1ಕ್ಕೆ ಅವರು ಸಲ್ಲಿಸಿದ ವಿವರಣೆ:**

ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು ಅವರು ನನ್ನನ್ನು ಶಿವಮೊಗ್ಗದಿಂದ ವರ್ಗಾಯಿಸಿ ಚಿಕ್ಕಮಗಳೂರು ಜಿಲ್ಲಾ ಪಂಚಾಯಿತಿಗೆ (ಸಾಂಖ್ಯಿಕ ಅಧಿಕಾರಿ) ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ದಿನಾಂಕ:

30.09.2004ರಂದು ಆದೇಶ ಹೊರಡಿಸಿದರು. ಸದರಿ ಆದೇಶದ ಷರಾದಲ್ಲಿ ಕೋರಿಕೆ ಎಂದು ತಿಳಿಸಲಾಗಿತ್ತು. ನಾನು 2004–05ನೇ ಸಾಲಿನಲ್ಲಿ ವರ್ಗಾವಣೆಯನ್ನು ಕೋರಿದ್ದು ನಿಜ. ಆದರೆ ಸಾಮಾನ್ಯ ವರ್ಗಾವಣೆ ಅವಧಿ 31.05.2004ಕ್ಕೆ ಮುಕ್ತಾಯಗೊಂಡಿತ್ತು. ಅಂದರೆ ನನ್ನ ಕೋರಿಕೆಯನ್ನು 2004–05ನೇ ಸಾಲಿಗೆ ಸಾಮಾನ್ಯ ವರ್ಗಾವಣೆ ಅವಧಿಯಲ್ಲಿ ಪರಿಗಣಿಸದೆ ಕೈಬಿಟ್ಟರು. ಆದ ಕಾರಣ ನನ್ನ ಪತ್ನಿಯ ಅನಾರೋಗ್ಯದ ಹಾಗೂ ನನ್ನ ಮಗನ ಪಿಯುಸಿ ವಿದ್ಯಾಭ್ಯಾಸಕ್ಕಾಗಿ ಶಿವಮೊಗ್ಗದಲ್ಲಿಯೇ ಮುಂದುವರೆಸಲು ನಿರ್ಧರಿಸಿ ಅವನನ್ನು ಕಾಲೇಜಿಗೆ ವರ್ಷದ ಫೀ ಇತ್ಯಾದಿಗಳನ್ನು ಕಟ್ಟಿ ಸೇರಿಸಿದ್ದಲ್ಲದೇ ಹೆಚ್ಚಿನ ತಿಳುವಳಿಕೆ ಪಡೆಯಲು ಖಾಸಗಿ ಪಾಠದ ವ್ಯವಸ್ಥೆಯನ್ನು ಸಹ ಮಾಡಿಸಿದ್ದೆನು. ಆದರೆ ಮಾನ್ಯ ನಿರ್ದೇಶಕರು, ದಿನಾಂಕ: 30.09.2004ರಂದು ವರ್ಗಾವಣೆ ಆದೇಶ ಮಾಡಿದ್ದು ವರ್ಷದ ಮಧ್ಯಮಾವಧಿ ಆಗಿರುವುದಲ್ಲದೆ ನನ್ನ ಕೋರಿಕೆ ಅವಧಿ ಮೀರಿದ ನಂತರ ಹೊರಡಿಸಿದ್ದ ಆದೇಶವಾಗಿರುತ್ತದೆ. ಈ ವರ್ಗಾವಣೆ ಆದೇಶದಿಂದ ಭಾದಿತನಾದ ನಾನು ಕರ್ನಾಟಕ ಆಡಳಿತ ಮಂಡಳಿಯಲ್ಲಿ ನ್ಯಾಯ ಕೋರಿ ಅರ್ಜಿ ಸಲ್ಲಿಸಿದ್ದೆನು. ಗೌರವಾನ್ವಿತ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯವರು ನನ್ನ ಮನವಿಯನ್ನು ವಿಚಾರಣೆಗೆ ಅಂಗೀಕರಿಸಿ ವಿಚಾರಣೆಯನ್ನು ನಡೆಸಿ ದಿನಾಂಕ: 18.10.2004ರಂದು ಈ ಕೆಳಕಂಡಂತೆ ಆದೇಶ ನೀಡಿದರು. (ಅರ್ಜಿ ಸಂಖ್ಯೆ: 5536/2004)

"The applicant may file review application before the cadre management Authority in terms of cause-II of the Government Order dated 22–11–2001**"** ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ನಿರ್ದೇಶನ ಪಾಲಿಸಲು ಅವಕಾಶವನ್ನು ನೀಡದೆ ನಾನು ದಿನಾಂಕ:12.10.2004ರಿಂದ 18.10.2004ರ ವರೆಗೆ ಪರಿವರ್ತಿತ ರಜೆ ಮಂಜೂರಾತಿಯನ್ನು ವೈದ್ಯಕೀಯ ಕಾರಣದ ಮೇಲೆ ಕೋರಿರುವುದನ್ನು ಸಹ ಲೆಕ್ಕಿಸದೇ ನನ್ನನ್ನು ದಿನಾಂಕ: 14.10.2004ರ ಅಪರಾಹ್ನ ಕರ್ತವ್ಯದಿಂದ ಬಿಡುಗಡೆಗೊಳಿಸಿರುವುದಾಗಿ ಜಿಲ್ಲಾ ಸಾಂಖ್ಯಿಕ ಅಧಿಕಾರಿ, ಶಿವಮೊಗ್ಗ ಇವರು ತಪ್ಪು ಮಾಹಿತಿಯನ್ನು ಮೇಲಾಧಿಕಾರಿಯವರಿಗೆ ಒಪ್ಪಿಸಿರುತ್ತಾರೆ. ಆದರೆ **ವಾಸ್ತವದಲ್ಲಿ ನಾನು ಅಕ್ಟೋಬರ್ 2004,** ನವೆಂಬರ್ 2004, ಈ ಎರಡು ತಿಂಗಳುಗಳು ಮತ್ತು ಡಿಸೆಂಬರ್ 2004ರ 1 ಮತ್ತು 2ನೇ ತಾರೀಖುಗಳಲ್ಲಿ ಶಿವಮೊಗ್ಗ ಸಾಂಖ್ಯಿಕ ಅಧಿಕಾರಿಗಳ ಕಛೇರಿಯಲ್ಲಿ ಕೆಲಸ ನಿರ್ವಹಿಸಿರುತ್ತೇನೆ. ಈ ಹೇಳಿಕೆಗೆ ಆಧಾರವಾಗಿ ಮೇಲೆ ಹೇಳಿರುವ ಅವಧಿಯ ಹಾಜರಿ ತಃಖ್ತೆಯನ್ನು ಮತ್ತು ರಜಾ ಅರ್ಜಿ ಹಾಗೂ ವೈದ್ಯಕೀಯ ಪ್ರಮಾಣ ಪತ್ರವನ್ನು ಕ್ರಮವಾಗಿ ನಿಶಾನೆ ಡಿ–1, ಡಿ–2, ಡಿ–3, ಡಿ–4 ಮತ್ತು ಡಿ–5 ಮತ್ತು ಡಿ–5(ಎ) ಎಂದು ಗುರುತಿಸಿ ತಮ್ಮ ಅವಗಾಹನೆಗಾಗಿ ಒಪ್ಪಿಸಿರುತ್ತೇನೆ. ಮೇಲೆ ವಿವರಿಸಿರುವ ಅಂಶಗಳೂ ದಾಖಲೆಗಳ ಆಧಾರದಿಂದ ಕೂಡಿರುವುದರಿಂದ ನನ್ನ ಮೇಲೆ ಹೊರಿಸಿರುವ ಒಂದನೇ ಆರೋಪದಲ್ಲಿ ಪ್ರಸ್ತಾಪಿಸಿರುವ ಯಾವುದೇ ಅಂಶಗಳು ವಾಸ್ತವ ಸಂಗತಿಗಳಿಂದ ಕೂಡಿರುವುದಿಲ್ಲ. ಅಂದರೆ ಸತ್ಯಕ್ಕೆ ದೂರವಾಗಿವೆ ಹಾಗೂ ನಿರಾಧಾರವಾಗಿದೆ. ಆದುದರಿಂದ ಆರೋಪವನ್ನು ಒಪ್ಪದೇ ನಿರಾಕರಿಸುತ್ತೇನೆ.

**ಆರೋಪ: 1ಕ್ಕೆ ಸಲ್ಲಿಸಿರುವ ಅವರ ವಿವರಣೆಯ ವಿಶ್ಲೇಷಣೆ:**

ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಎ.ಕೆ. ಹನುಮಂತಪ್ಪ, ಸಹಾಯಕ ನಿರ್ದೇಶಕರು ದಿನಾಂಕ: 20.08.2004ರಂದು (ಅನುಬಂಧ–ಎ ರಲ್ಲಿದೆ) ಹಾಗೂ ಶ್ರೀ ಎನ್. ವಾಸುದೇವ, ಸಹಾಯಕ ನಿರ್ದೇಶಕರು, ದಿನಾಂಕ: 03.09.2004 **(ಅನುಬಂಧ–ಬಿ)** ರಂದು ಸಲ್ಲಿಸಿದ ಪರಸ್ಪರ ಕೋರಿಕೆ ವರ್ಗಾವಣೆ ಮನವಿಗಳನ್ನು ಪರಿಗಣಿಸಿ 2004–05ನೇ ಸಾಲಿನ ಸರ್ಕಾರಿ ನೌಕರರ ವರ್ಗಾವಣೆಗೆ ಸಂಬಂಧಿಸಿದಂತೆ ಹೊರಡಿಸಲಾಗಿದ್ದ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ 7 ಸೇನೌವ 2004 ದಿನಾಂಕ: 01.09.2004ರ ಅನ್ವಯ **(ಅನುಬಂಧ–ಜಿ)** ಶ್ರೀ ಎ.ಕೆ. ಹನುಮಂತಪ್ಪ ಸಹಾಯಕ ನಿರ್ದೇಶಕರು, ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಛೇರಿ, ಶಿವಮೊಗ್ಗ ಮತ್ತು ಶ್ರೀ ಎನ್. ವಾಸುದೇವ, ಸಹಾಯಕ ನಿರ್ದೇಶಕರು, ಜಿಲ್ಲಾ ಪಂಚಾಯಿತಿ, ಚಿಕ್ಕಮಗಳೂರು ಇವರುಗಳನ್ನು ಅವರುಗಳ ಕೋರಿಕೆಯ ಅನ್ವಯ (ಅದೇ ಆದೇಶದಲ್ಲಿ ಇನ್ನಿತರ 6 ಸಹಾಯಕ ನಿರ್ದೇಶಕರುಗಳನ್ನು ಸೇರಿಸಿ) ಆದೇಶದ ದಿನಾಂಕ: 30.09.2004ರಲ್ಲಿ (ಅನುಬಂಧ–ಇ) ಪರಸ್ಪರ ವರ್ಗಾವಣೆ ಮಾಡಲಾಗಿತ್ತು.

ಸದರಿ ಅವರು ದಿನಾಂಕ: 20.08.2004 (ಅನುಬಂಧ–ಎ) ರಂದು ವರ್ಗಾವಣೆಗಾಗಿ ಅರ್ಜಿ ಸಲ್ಲಿಸಿದ್ದನ್ನು ಪರಿಗಣಿಸಿ ದಿನಾಂಕ:30.09.2004 (ಅನುಬಂಧ–ಇ) ಆದೇಶದಲ್ಲಿ ವರ್ಗಾವಣೆ ಮಾಡಲಾಗಿತ್ತಾದರೂ ಹಾಗೂ ಆ ಆದೇಶದ ಅನ್ವಯ ದಿನಾಂಕ:14.10.2004ರ ಆದೇಶದಲ್ಲಿ ಅವರನ್ನು ಬಿಡುಗಡೆಗೊಳಿಸಿದ್ದರೂ **(ಅನುಬಂಧ–ಎಫ್)** ಅವರ ಸ್ವಂತ ಕೋರಿಕೆ ಅನ್ವಯ ಮಾಡಲಾಗಿದ್ದ ಈ ವರ್ಗಾವಣೆ ವಿರುದ್ಧ ಸದರಿ ಶ್ರೀ ಎ.ಕೆ. ಹನುಮಂತಪ್ಪ, ಸಹಾಯಕ ನಿರ್ದೇಶಕರು, ಗೌರವಾನ್ವಿತ ಕರ್ನಾಟಕ ಆಡಳಿತ ಮಂಡಳಿಯಲ್ಲಿ ಸಲ್ಲಿಸಿದ್ದ ಅರ್ಜಿ ಸಂಖ್ಯೆ:5536/2004ಕ್ಕೆ ಸಂಬಂಧಿಸಿದಂತೆ ದಿನಾಂಕ:18.10.2004 ರಂದು ಗೌರವನ್ವಿತ ಆಡಳಿತ ನ್ಯಾಯ ಮಂಡಳಿಯಲ್ಲಿ ಹೊರಡಿಸಿದ ಆದೇಶದಲ್ಲಿ **(ಅನುಬಂಧ–ಎಚ್)** "in the light of the alternative remady available for the applicant we decline to interfere with the present application. However, **if the applicant is not already relieved as on today,** the applicant may file a review application before the Cadre

Management Authority in terms of clause-II of the Government Order dated 22.11.2001 on or before 21.10.2004. The cadre management authority is directed to consider the request of the applicant and pass appropriate orders in accordance with law within one week thereafter. If the applicant is not relieved as an today the I^st Respondent is directed not to give affect to the impugned order dated 30.09.2004" ಎಂದು ಆದೇಶಿಸಲ್ಪಟ್ಟಿತ್ತು.

ಕೋರಿಕೆ ವರ್ಗಾವಣೆ ಆದೇಶದಲ್ಲಿದ್ದ ಶ್ರೀ ಎ.ಕೆ. ಹನುಮಂತಪ್ಪ, ಸಹಾಯಕ ನಿರ್ದೇಶಕರನ್ನು ದಿನಾಂಕ: 14.10.2004ರ ಆದೇಶದಲ್ಲಿಯೇ **(ಅನುಬಂಧ– ಎಫ್)** ಅಂದರೆ ಗೌರವಾನ್ವಿತ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಆದೇಶ ಹೊರಡಿಸುವ ಪೂರ್ವದಲ್ಲಿಯೇ ಬಿಡುಗಡೆಗೊಳಿಸಿದ್ದರಿಂದ ಮೇಲೆ ವಿವರಿಸಲಾದ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶದಿಂದ ಶ್ರೀ ಎ.ಕೆ. ಹನುಮಂತಪ್ಪ, ಸಹಾಯಕ ನಿರ್ದೇಶಕರ ವರ್ಗಾವಣೆ ಆದೇಶಕ್ಕೆ ಯಾವುದೇ ಪರಿಣಾಮವಾಗದೇ ಇದ್ದಾಗ್ಯೂ ಶ್ರೀ ಎ.ಕೆ. ಹನುಮಂತಪ್ಪ, ಸಹಾಯಕ ನಿರ್ದೇಶಕರು, ದಿನಾಂಕ:19.11.2004ರಂದು ಹಾಗೂ ಅವರ ಪತ್ನಿಯು ದಿನಾಂಕ: 17.11.2004ರಂದು **(ಅನುಬಂಧ –ಜೆ ಮತ್ತು ಅನುಬಂಧ –ಕೆ)** ಸಲ್ಲಿಸಿದ್ದ ಅರ್ಜಿಗಳನ್ನು ಪರಿಶೀಲಿಸಿ ಹಾಗೂ ಶ್ರೀ ಎ.ಕೆ. ಹನುಮಂತಪ್ಪ, ಸಹಾಯಕ ನಿರ್ದೇಶಕರು, ದಿನಾಂಕ:20.08.2004ರಂದು ವರ್ಗಾವಣೆಗಾಗಿ ಸಲ್ಲಿಸಿದ್ದ ಅವರ ಅರ್ಜಿಯನ್ನು ವರ್ಗಾವಣೆ ಆದೇಶ ಹೊರಡಿಸುವ ದಿನಾಂಕದವರೆಗೆ ಯಾವುದೇ ಹಂತದಲ್ಲಿಯೂ ಹಿಂದಕ್ಕೆ ಪಡೆಯದೆ ಇದ್ದುದರಿಂದ ಈ ಎಲ್ಲಾ ಅಂಶಗಳನ್ನೊಳಗೊಂಡಂತೆ ಹೊರಡಿಸಲಾಗಿದ್ದ **"ಹಿಂಬರಹ"**ದ ಸಂಖ್ಯೆ: ಆಸಾಂನಿ/16/ಆಡಳಿತ(1)/ 2004–05 ದಿನಾಂಕ: 10.12.2004ರಲ್ಲಿ **(ಅನುಬಂಧ–ಎಲ್)** "ದಿನಾಂಕ: 14.10.2004ರಂದು ಅಪರಾಹ್ನ ಅವರನ್ನು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಶಿವಮೊಗ್ಗ ಇವರು ಬಿಡುಗಡೆಗೊಳಿಸಿದ್ದರಿಂದ ಅವರ ಸ್ಥಾನವು **"ಪರಸ್ಪರ ಕೋರಿಕೆ"** ವರ್ಗಾವಣೆಯಿಂದ ಭರ್ತಿ ಆಗಿದ್ದರಿಂದ ದಿನಾಂಕ:14.10.2004ರ ನಂತರ ಆ ಕಛೇರಿಯಲ್ಲಿ ಮುಂದುವರೆಯಲು ಅವಕಾಶವಿಲ್ಲವಾದ್ದರಿಂದ ಅವರು ತಕ್ಷಣ ಅವರ ಕೋರಿಕೆ ಮೇಲೆ ವರ್ಗಾವಣೆಯಾದ ಕಛೇರಿಯಲ್ಲಿ ಅಂದರೆ ಜಿಲ್ಲಾ ಪಂಚಾಯತಿ, ಚಿಕ್ಕಮಗಳೂರು ಇಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವಂತೆ ಸೂಚಿಸಲಾಗಿತ್ತು.

ದಿನಾಂಕ: 14.09.2004ರಂದು ಬಿಡುಗಡೆ ಹೊಂದಿದ್ದ ಇವರು ಅಕ್ಟೋಬರ್ 2004, ನವೆಂಬರ್ 2004–2 ತಿಂಗಳು ಹಾಗೂ ಡಿಸೆಂಬರ್ 2004ರ 1 ಮತ್ತು 2ನೇ ದಿನಾಂಕಗಳಂದು ಶಿವಮೊಗ್ಗ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಛೇರಿಯಲ್ಲಿಯೇ ಕೆಲಸ ನಿರ್ವಹಿಸಿರುತ್ತೇನೆ ಎಂಬ ಅವರ ವಿವರಣೆ ಸಂಪೂರ್ಣ ಅತೃಪ್ತಿಕರ ಹಾಗೂ ನಂಬಲರ್ಹವಾಗುತ್ತದೆಯಾದ್ದರಿಂದ ಆರೋಪ–1ಕ್ಕೆ ಸಲ್ಲಿಸಿರುವ ಅವರ ವಿವರಣೆಯನ್ನು ತಿರಸ್ಕರಿಸಲಾಗಿದೆ. ಸದರಿ ಸಮೂಹ 'ಬಿ' ಅಧಿಕಾರಿಗಳು ಅವರ ವಿವರಣೆಯೊಂದಿಗೆ ಅವರು ದಿನಾಂಕ: 14.09.2004ರಂದು (ಅನುಬಂಧ_ಎಫ್) ನಿಡುಗಡೆ ಹೊಂದಿದ್ದರೂ, ಅಕ್ಟೋಬರ್– 2004, ನವೆಂಬರ್ –2004 2 ತಿಂಗಳು ಮತ್ತು ಡಿಸೆಂಬರ್–2004ರ 1–2ನೇ ದಿನಾಂಕಗಳಂದು ಶಿವಮೊಗ್ಗ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಕುರಿತು ಅವರು ಸಲ್ಲಿಸಿರುವ ಹಾಜರಾತಿ ಪುಸ್ತಕದ ಪ್ರತಿಯನ್ನು ಪರಿಶೀಲಿಸಲಾಗಿ ಶ್ರೀ ಎ.ಕೆ. ಹನುಮಂತಪ್ಪ, ಅವರ ಸ್ಥಳದಲ್ಲಿ ಪರಸ್ಪರ ವರ್ಗಾವಣೆ ಹೊಂದಿದ್ದ ಶ್ರೀ ಎನ್. ವಾಸುದೇವ, ಸಹಾಯಕ ನಿರ್ದೇಶಕರು, ದಿನಾಂಕ: 21.10.2004ರಂದೇ ಕರ್ತವ್ಯಕ್ಕೆ ಹಾಜರಾಗಿದ್ದರಿಂದ ಹಾಗೂ ಮಂಜೂರಾದ **"ಒಂದೇ ಹುದ್ದೆಯಲ್ಲಿ"** ಇಬ್ಬರೂ ಅಧಿಕಾರಿಗಳು ಕರ್ತವ್ಯ ನಿರ್ವಹಿಸುವುದಕ್ಕಾಗಲೀ ಅಥವಾ ಹಾಜರಾತಿ ಪುಸ್ತಕದಲ್ಲಿ ಸಹಿ ಮಾಡಲು ಅವಕಾಶವಿಲ್ಲವಾದ್ದರಿಂದ ಆ ಕಛೇರಿಯಿಂದ ಬಿಡುಗಡೆ ಹೊಂದಿದ್ದ ಸದರಿ ಅಪಾದಿತ ಸಹಾಯಕ ನಿರ್ದೇಶಕರಾದ ಶ್ರೀ ಎ.ಕೆ. ಹನುಮಂತಪ್ಪ, ಅವರು ಬಿಡುಗಡೆ ಹೊಂದಿದ ದಿನಾಂಕದ ನಂತರ ಹಾಜರಾತಿ ಪುಸ್ತಕದಲ್ಲಿ ಸಹಿ ಹಾಕಿದಲ್ಲಿ ಅದು ಸರ್ಕಾರದ ಕಛೇರಿಯಲ್ಲಿನ ದಾಖಲಾತಿಯನ್ನು ಒತ್ತಾಯಪೂರ್ವಕವಾಗಿ ಪಡೆದುಕೊಂಡ ಅಪರಾಧವೆಂದು (tamparing of office records) ಪರಿಗಣಿಸತಕ್ಕದ್ದಾಗಿದೆ ಹಾಗೂ ಇಂತಹ ಅಪರಾಧಕ್ಕಾಗಿ ಸದರಿ ಅವರ ವಿರುದ್ಧ ಪ್ರತ್ಯೇಕವಾದ ಕ್ರಮ ಜರುಗಿಸುವುದನ್ನು ಕಾಯ್ದಿರಿಸಿ, ಅವರ ಮನವಿಯಲ್ಲಿನ ಈ ಅಂಶಗಳನ್ನು ಸಂಪೂರ್ಣವಾಗಿ ಅಸಮರ್ಪಕವೆಂದು ತಿರಸ್ಕರಿಸಲಾಗಿದೆ.

**ಆರೋಪ–2**

ಮೇಲಿನ ಕಂಡಿಕೆ/ಆರೋಪ: 1ರಲ್ಲಿನ ಆಪಾದನೆಗಳಲ್ಲಿ ವಿವರಿಸಿದಂತೆ ದಿನಾಂಕ: 14.10.2004ರಂದು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಶಿವಮೊಗ್ಗ ಇಲ್ಲಿಂದ ಬಿಡುಗಡೆಯಾಗಿದ್ದ ಸಮೂಹ 'ಬಿ' ಅಧಿಕಾರಿಗಳಾದ ನೀವು ವರ್ಗಾವಣೆ ಹೊಂದಿದ ಕಛೇರಿಯಲ್ಲಿ ತಕ್ಷಣ ವರದಿ ಮಾಡಿಕೊಳ್ಳದೆ ದಿನಾಂಕ:15.10.2004ರಿಂದ 02.09.2005ರ ವರೆಗೆ ಅಂದರೆ 10 ತಿಂಗಳುಗಳಿಗಿಂತ ಹೆಚ್ಚಿನ ಅವಧಿಗೆ ಸರ್ಕಾರದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಸಮೂಹ 'ಬಿ' ವೃಂದಕ್ಕೆ ಸೇರಿದ ನೀವು ಸರ್ಕಾರದ ಅಧಿಕಾರಿಗಳೊಬ್ಬರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುತ್ತೀರಿ.

ಕರ್ನಾಟಕ ನಾಗರೀಕ ಸೇವಾ ನಿಯಮಗಳು. 1957ರ ನಿಯಮ:88ರ ಅನ್ವಯ "ಸರ್ಕಾರಿ ನೌಕರನು ವರ್ಗಾವಣೆ ಹೊಂದಿದ ಸಂದರ್ಭದಲ್ಲಿ ಅವರ ಸೇರಿಕೆ ಕಾಲಾವಧಿಯನ್ನು ಮೀರಿ ಗೈರು ಹಾಜರಾದಲ್ಲಿ ಅಂತಹ ಗೈರು ಹಾಜರಾತಿಯನ್ನು ನಿಯಮ: 106–ಎರ ಅನ್ವಯ ಅನಧಿಕೃತ ಗೈರುಹಾಜರಾತಿ ಎಂದು" ಪರಿಗಣಿಸತಕ್ಕದ್ದಾಗಿದ್ದರಿಂದ, ಪ್ರಸ್ತುತ ಪ್ರಕರಣದಲ್ಲಿ ಸೇರಿಕೆ ಕಾಲಾವಧಿಯನ್ನು ಮೀರಿ ದಿನಾಂಕ: 15.10.2004ರಿಂದ 02.09.2005ರ ವರೆಗೆ ದೀರ್ಘಾವಧಿ ಅನಧಿಕೃತ ಗೈರು ಹಾಜರಾದ ನೀವು ಕರ್ನಾಟಕ ನಾಗರೀಕ ಸೇವಾ(ನಡತೆ) ನಿಯಮಗಳು, 1966ರ ನಿಯಮ: 3ನ್ನು ಉಲ್ಲಂಘಿಸಿರುವುದರಿಂದ ನಿಮ್ಮ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸಲು ಉದ್ದೇಶಿಸಲಾಗಿದೆ.

**ಆರೋಪ: 2ಕ್ಕೆ ಅವರು ಸಲ್ಲಿಸಿದ ವಿವರಣೆ:**

ನನ್ನನ್ನು ಶಿವಮೊಗ್ಗ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಛೇರಿಯ ಕರ್ತವ್ಯದಿಂದ ದಿನಾಂಕ:14.10.2009ರಂದು ಬಿಡುಗಡೆ ಮಾಡಿದೆ ಎಂಬ ಆರೋಪ ಸತ್ಯವಲ್ಲ. ತಪ್ಪು ಮಾಹಿತಿಯಿಂದ ರಚಿಸಲ್ಪಟ್ಟ ಆರೋಪವಾಗಿದೆ. ಹಾಜರಿ ತಃಖ್ತೆಯ ಪ್ರಕಾರ ನನ್ನನ್ನು ದಿನಾಂಕ:02.12.2004ರ ಅಪರಾಹ್ನ ಕರ್ತವ್ಯದಿಂದ ಬಿಡುಗಡೆಗೊಳಿಸಿರುತ್ತಾರೆ. ಈ ಬಗ್ಗೆ ನಾನು ತಮ್ಮ ಅವಗಾಹನೆಗಾಗಿ ಲಗತ್ತಿಸಿರುವ ನಿಶಾನೆ ಡಿ–1, ಡಿ–2, ಮತ್ತು ಡಿ–3ರ ದಸ್ತಾವೇಜುಗಳನ್ನು ಪರಾಂಬರಿಸಬೇಕೆಂದು ಪ್ರಾರ್ಥಿಸುತ್ತೇನೆ. ನಾನು ದಿನಾಂಕ:03.12.2004 ರಿಂದ 02.09.2005ರ ವರೆಗೆ ಗೈರು ಹಾಜರಾಗಿರುವುದಕ್ಕೆ ಸಕ್ಷಮ ಪ್ರಾಧಿಕಾರಿಯವರಿಗೆ ರಜೆ ಅರ್ಜಿಯನ್ನು ಸಹ ಸಲ್ಲಿಸಿ ಮಂಜೂರಾತಿಯನ್ನು ಕೋರಿರುತ್ತೇನೆ. ನನ್ನ ಸಕ್ಷಮ ಪ್ರಾಧಿಕಾರಿಗಳು ನನ್ನ ರಜೆ ಅರ್ಜಿಯನ್ನು ಪುರಸ್ಕರಿಸಿ ರಜೆ ಮಂಜೂರು ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಈಗಾಗಲೇ ರವಾನಿಸಲಾಗಿದೆ ಎಂಬುದಾಗಿ ನನಗೆ ದಿನಾಂಕ:16.02.2008ರ ಪತ್ರದಲ್ಲಿ (ಸಂ.ಆಸಾಂನಿ/184/ಆಡಳಿತ–1/2006–07) ತಿಳಿಸಿರುತ್ತಾರೆ. ಸದರಿ ಪತ್ರದ ಛಾಯಾ ಪ್ರತಿಯನ್ನು ನಿಶಾನೆ ಡಿ–6 ಎಂದು ಗುರುತಿಸಿ ಒಪ್ಪಿಸಿರುವುದರ ಜೊತೆಗೆ ಆ ಪತ್ರದ ಕೊನೆ ಕಂಡಿಕೆಯನ್ನು ತಮ್ಮ ದಯಾಪೂರಿತವಾದ ಅವಗಾಹನೆಗೆ ತರಬಯಸುತ್ತೇನೆ.

ಆದುದರಿಂದ ನಿಮ್ಮ ಎಲ್ಲಾ ಸಮಸ್ಯೆಗಳನ್ನು ಅರ್ಥೈಸಿಕೊಂಡು ಮಾನವೀಯ ದೃಷ್ಠಿಯ ನಿರ್ಧಾರವನ್ನು ತಳೆದು ನೀವು ಕೋರಿರುವ ರಜೆಯನ್ನು ಮಂಜೂರು ಮಾಡುವಂತೆ ಸರ್ಕಾರಕ್ಕೆ ಉಲ್ಲೇಖ(4)ರ ಈ ಕಛೇರಿಯ ಪತ್ರದಲ್ಲಿ ಶಿಫಾರಸ್ಸು ಮಾಡಿ ಈಗಾಗಲೇ ರವಾನಿಸಲಾಗಿದೆ".

ಮುಂದುವರೆದಂತೆ ಮಾನ್ಯ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು, ಇವರು ದಿನಾಂಕ: 05/11–04–2008ರ ಪತ್ರದಲ್ಲಿ (ಸಂಖ್ಯೆ: ಆಸಾಂನಿ/247/ಆಡಳಿತ–1/2007–08/1068–70) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಬೆಂಗಳೂರು ಇವರನ್ನು "ಮೇಲ್ಕಂಡ ಎಲ್ಲಾ ಮಾಹಿತಿಯೊಂದಿಗೆ ಸರ್ಕಾರಕ್ಕೆ ರವಾನಿಸುತ್ತಾ ಸದರಿಯವರು ಮಂಜೂರು ಮಾಡುವಂತೆ ಕೋರಿರುವ ರಜೆಯನ್ನು ಮಾನವೀಯ ದೃಷ್ಟಿಯಿಂದ ಮಂಜೂರು ಮಾಡುವಂತೆ ಕೋರಿ ಸಲ್ಲಿಸಿದೆ" ಎಂದು ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪತ್ರದ ಪ್ರತಿಯನ್ನು ನಿಶಾನೆ ಡಿ–7 ಎಂದು ಗುರುತಿಸಿ ತಮ್ಮ ದಿವ್ಯ ಅವಗಾಹನೆಗೆ ಸಲ್ಲಿಸಿದೆ.

ಮೇಲಿನ ಎರಡು ಪತ್ರಗಳ (ನಿಶಾನೆ ಡಿ–6 ಮತ್ತು ಡಿ–7) ಹಿನ್ನೆಲೆಯಲ್ಲಿ ನನ್ನ ಗೈರು ಹಾಜರಿಯನ್ನು ಕೆ.ಸಿ.ಎಸ್.ಆರ್. ನಿಯಮ 106–ಎ ವ್ಯಾಪ್ತಿಗೆ ಒಳಪಡಿಸಲು ಬರುವುದಿಲ್ಲ. ಈ ಸಂದರ್ಭದಲ್ಲಿ 106–ಎ ನಿಯಮ ಉದೃತ ಭಾಗವನ್ನು ಯಥಾವತ್ತಾಗಿ ತಮ್ಮ ಅವಗಾಹನೆಗಾಗಿ ಮಂಡಿಸಿರುತ್ತೇನೆ.

"Except where the Government Servent without leave granted by a competent Authority will also render such Government servent liable to disciplinary action for misconduct except where the Government servent estabilishes to the statisfaction of the authority competent to sanction leave that he was unable to join duty for reasons beyond his control"

ಮೇಲೆ ವಿವರಿಸಿರುವ ಅಂಶಗಳು, ಎರಡು ಪತ್ರಗಳು ಮತ್ತು 106–ಎ ನಿಯಮದ ಅಂತಿಮ ಕಂಡಿಕೆ ಪ್ರಕಾರ ನಾನು ದುರ್ನಡತೆ ಎಸಗಿಲ್ಲ ಎಂಬುದು ದೃಢಪಡುತ್ತದೆ. ಆ ಕಾರಣದಿಂದ ನನ್ನ ಮೇಲೆ ಹೊರಿಸಿರುವ ಎರಡನೇ ಆರೋಪವು ಸಿಂಧುವಾಗುವುದಿಲ್ಲ. ಆದ್ದರಿಂದ ಆರೋಪವನ್ನು ಒಪ್ಪದೇ ನಿರಾಕರಿಸುತ್ತೇನೆ.

**ಆರೋಪ: 2ಕ್ಕೆ ಸಲ್ಲಿಸಿರುವ ಅವರ ವಿವರಣೆಯ ವಿಶ್ಲೇಷಣೆ:**

2ನೇ ಆರೋಪಕ್ಕೆ ಸಂಬಂಧಿಸಿದಂತೆ ಆಪಾದಿತ ಸರ್ಕಾರಿ ಅಧಿಕಾರಿಗಳಾದ ಶ್ರೀ ಎ.ಕೆ. ಹನುಮಂತಪ್ಪ, ಸಹಾಯಕ ನಿರ್ದೇಶಕರು, ಸಲ್ಲಿಸಿರುವ ಅವರ ವಿವರಣೆಯನ್ನು "ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳು, ಶಿವಮೊಗ್ಗ ಇವರು ಆ ಕಛೇರಿಯಿಂದ ದಿನಾಂಕ:14.10.2004ರಂದು ಬಿಡುಗಡೆ ಮಾಡಲಾಗಿದೆ ಎಂಬ ಆರೋಪವು ಸತ್ಯವಲ್ಲ ಹಾಗೂ ರಚಿಸಲ್ಪಟ್ಟ ಆರೋಪವಾಗಿರುತ್ತದೆ ಎಂದು ವಾದಿಸಿರುತ್ತಾರೆ.

ಶ್ರೀ ಎ.ಕೆ. ಹನುಮಂತಪ್ಪ, ಸಹಾಯಕ ನಿರ್ದೇಶಕರು, ಮತ್ತು ಇತರೇ 6 ಸಹಾಯಕ ನಿರ್ದೇಶಕರನ್ನು ದಿನಾಂಕ: 30.09.2004ರಂದು ಹೊರಡಿಸಲಾದ ವರ್ಗಾವಣೆ ಆದೇಶದಲ್ಲಿಯೇ **"ಸಂಬಂಧಿಸಿದ ಕಛೇರಿಯ ಅಧಿಕಾರಿಗಳು ವರ್ಗಾವಣೆ ಹೊಂದಿದ ಅಧಿಕಾರಿಗಳನ್ನು ಕರ್ತವ್ಯದಿಂದ ತಕ್ಷಣ ಬಿಡುಗಡೆಗೊಳಿಸಿ ವರ್ಗಾವಣೆ ಆಗಿರುವ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗಲು ಸೂಚನೆ ನೀಡತಕ್ಕದ್ದೆಂದು ಆದೇಶಿಸಿದ್ದರಿಂದ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳು, ಅವರನ್ನು ಬಿಡುಗಡೆ ಮಾಡಿದ್ದು, ಅವರನ್ನು ಆ ಕಛೇರಿಯಿಂದ ಬಿಡುಗಡೆ ಮಾಡಲೇ ಇಲ್ಲವೆಂಬ ಅವರ ಹೇಳಿಕೆಯು ಸಮರ್ಥನೀಯವಾಗಿಲ್ಲವಾದ್ದರಿಂದ ಯಾವುದೇ ಕಾರಣಕ್ಕೂ ಒಪ್ಪಲು ಸಾಧ್ಯವಿಲ್ಲ.**

ಸದರಿ ಆಪಾದಿತ ಸರ್ಕಾರಿ ಅಧಿಕಾರಿಗಳು ವರ್ಗಾವಣೆ ಆದೇಶದಲ್ಲಿದ್ದ ಅವಧಿಯಲ್ಲಿ ಗೈರು ಹಾಜರಾದ ಅವಧಿಗೆ ಸಂಬಂಧಿಸಿದಂತೆ ರಜೆ ಮಂಜೂರಾತಿಗಾಗಿ ಸಲ್ಲಿಸಿದ್ದ ಅವರ ಮನವಿಯಲ್ಲಿ ಸದರಿ ಅವರು ಕೋರಿಕೆ ಮೇಲೆ ವರ್ಗಾವಣೆ ಹೊಂದಿರುವ ಕುರಿತು ಹಾಗೂ ಆ ವರ್ಗಾವಣೆ ವಿರುದ್ಧ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಮೊರೆ ಹೋಗಿದ್ದನ್ನು ಕುರಿತು ಯಾವುದೇ ಮಾಹಿತಿಯನ್ನು ಸಲ್ಲಿಸದೇ ಇದ್ದುದರಿಂದ ಇದೊಂದು ಸಾಮಾನ್ಯ ರಜೆ ಪ್ರಕರಣವೆಂದು ಪರಿಗಣಿಸಿ ಮಾನವೀಯ ದೃಷ್ಟಿಯಿಂದ ರಜೆ ಮಂಜೂರು ಮಾಡುವಂತೆ ಸರ್ಕಾರವನ್ನು ಕೋರಲಾಗಿತ್ತಾದ್ದರಿಂದ ಈ ಹಂತದಲ್ಲಿ ರಜೆ ಮಂಜೂರಾತಿಗಾಗಿ ಪ್ರಸ್ತಾವನೆ ಸಲ್ಲಿಸಿದ್ದ ಇಲಾಖಾ ಮುಖ್ಯಸ್ಥರನ್ನು ಪರೋಕ್ಷವಾಗಿ ತಪ್ಪಿತಸ್ಥರೆಂಬ ರೀತಿಯಲ್ಲಿ 2ನೇ ಆರೋಪಕ್ಕೆ ಸಲ್ಲಿಸಿರುವ ಅವರ ವಿವರಣೆಯು ಪರಿಗಣಿಸಲು ಸೂಕ್ತವಲ್ಲವೆಂದು ತಿರಸ್ಕರಿಸಲಾಗಿದೆ.

**ಆರೋಪ–3:**

ಸರ್ಕಾರದ ಸೇವೆಯ ಸಮೂಹ 'ಬಿ' ವೃಂದದ ಒಬ್ಬ ಜವಾಬ್ದಾರಿಯುತ ಹುದ್ದೆಯನ್ನು ಹೊಂದಿರುವ ಅಧಿಕಾರಿಯಾದ ನೀವು 326 ದಿನಗಳಷ್ಟು ಸರ್ಕಾರದ ಸೇವೆಗೆ ಅನಧಿಕೃತ ಗೈರು ಹಾಜರಾಗಿ ನಿಮಗೆ ವಹಿಸಲಾದ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ನಿರ್ವಹಿಸದೇ ಬೇಜವಾಬ್ದಾರಿಯಿಂದ ವರ್ತಿಸಿರುವ ಕುರಿತು, ನಿಮ್ಮ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸಲು ಉದ್ದೇಶಿಸಲಾಗಿದೆ.

**ಆರೋಪ: 3ಕ್ಕೆ ಸಲ್ಲಿಸಿರುವ ಅವರ ವಿವರಣೆ:**

ನಾನು ತಮಗೆ ಸಲ್ಲಿಸಿರುವ ನಿಶಾನೆ ಡಿ–6 ಮತ್ತು ಡಿ–7 ಎಂಬ ಎರಡು ಸರ್ಕಾರದ ದಾಖಲೆಗಳೂ ಮತ್ತು ನಿಯಮ 106–ಎ, ಆರೋಪವನ್ನು ಸಮರ್ಥಿಸುವುದಿಲ್ಲ. ಆದಕಾರಣ ನನ್ನ ಮೇಲೆ ಹೊರಿಸಿರುವ ಆರೋಪವು 106–ಎ ನಿಯಮಕ್ಕೆ (ನಾನು ಮೇಲಿನ ಕಂಡಿಕೆಯಲ್ಲಿ ಮಂಡಿಸಿರುವ) ವಿರುದ್ಧವಾಗಿರುತ್ತದೆ ಎಂದು ದೃಢಪಡಿಸುತ್ತದೆ. ಆದ್ದರಿಂದ ಆರೋಪವನ್ನು ಸಹ ಒಪ್ಪದೇ ನಿರಾಕರಿಸುತ್ತೇನೆ.

**ಆರೋಪ: 3ಕ್ಕೆ ಸಲ್ಲಿಸಿರುವ ಅವರ ವಿವರಣೆಯ ವಿಶ್ಲೇಷಣೆ:**

ಆಪಾದಿತ ಸರ್ಕಾರಿ ಅಧಿಕಾರಿಗಳಾದ ಶ್ರೀ ಎ.ಕೆ. ಹನುಮಂತಪ್ಪ, ಸಹಾಯಕ ನಿರ್ದೇಶಕರು, ಮೇಲೆ ವಿವರಿಸಿದಂತೆ ಅವರ ಗೈರು ಹಾಜರಾತಿ ಅವಧಿಯನ್ನು ಅವರಿಗೆ ರಜಾ ಮಂಜೂರಾತಿ ಮಾಡುವಂತೆ ದಿನಾಂಕ: 05.04.2008ರಂದು ಸರ್ಕಾರಕ್ಕೆ ಸಲ್ಲಿಸಿದ ಪ್ರಸ್ತಾವನೆಯನ್ನು ಉಲ್ಲೇಖಿಸುತ್ತಾ, ಇಲಾಖಾ ಮುಖ್ಯಸ್ಥರದೇ ತಪ್ಪೆಂಬುವ ರೀತಿಯಲ್ಲಿ ವಿವರಣೆ ಸಲ್ಲಿಸಿದ್ದನ್ನು ಪರಿಶೀಲಿಸಲಾಗಿ ಹಾಗೂ 3ನೇ ಆರೋಪದಲ್ಲಿ ಆರೋಪಿಸಿದಂತೆ ಅವರ ವೈಯಕ್ತಿಕ ಅನಾನುಕೂಲತೆಗಳು/ ತೊಂದರೆಗಳು ಏನೇ ಆಗಿದ್ದರೂ ಅವರ ಕೋರಿಕೆ ಅನ್ವಯ ಅವರನ್ನು ವರ್ಗಾವಣೆ ಮಾಡಿದ್ದ ಸ್ಥಳ/ಕಛೇರಿಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡು ನಂತರ ರಜೆ ಉಪಯೋಗಿಸಬಹುದಾಗಿತ್ತಾದರಿಂದ, ಹಾಗೂ 3ನೇ ಆರೋಪದಲ್ಲಿ ವಿವರಿಸಿದಂತೆ ಈ ಜವಾಬ್ದಾರಿಯುತ ಸಮೂಹ 'ಬಿ' ವೃಂದದ ಅಧಿಕಾರಿಗಳಾದ ಸದರಿ ಅವರು ಸುದೀರ್ಘವಾದ ಅವಧಿಯಲ್ಲಿ ಸರ್ಕಾರದ ಕರ್ತವ್ಯದಿಂದ ವಿಮುಖವಾಗಿ ಉಳಿದು ಸರ್ಕಾರಿ ಅಧಿಕಾರಿಗಳೊಬ್ಬರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿದ್ದರಿಂದ ಹಾಗೂ 3ನೇ ಆರೋಪಕ್ಕೆ ಸಂಬಂಧಿಸಿದ ಅವರ ವಿವರಣೆಯಲ್ಲಿ ಕೂಡ ಇಲಾಖಾ ಮುಖ್ಯಸ್ಥರನ್ನು ಪರೋಕ್ಷವಾಗಿ ತಪ್ಪಿತಸ್ಥರೆಂಬ ರೀತಿಯಲ್ಲಿ ವಿವರಣೆ ನೀಡಿದ್ದನ್ನು ಒಪ್ಪಲು ಸಾಧ್ಯವಿಲ್ಲವೆಂದು ತಿರಸ್ಕರಿಸಲಾಗಿದೆ.

**ಆರೋಪ: 4**

ದಿನಾಂಕ: 14.10.2004ರಂದು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಶಿವಮೊಗ್ಗ ಇಲ್ಲಿಂದ ಬಿಡುಗಡೆ ಹೊಂದಿದ ತಕ್ಷಣ ವರ್ಗಾವಣೆ ಹೊಂದಿದ ಕಛೇರಿಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ದಿನಾಂಕ: 15.04.2004ರಿಂದ 02.09.2005ರ ವರೆಗೆ **"ಅನಧಿಕೃತ ಗೈರು ಹಾಜರಾಗಿ"** ದಿನಾಂಕ:03.09.2005ರಂದು ಅಂದರೆ 326 ದಿನಗಳಷ್ಟು ದಿನ ಅನಧಿಕೃತ ಗೈರು ಹಾಜರಾಗಿ ಪತ್ನಿಯ ಅನಾರೋಗ್ಯದ ಕಾರಣ ನೀಡಿ ಇಷ್ಟೊಂದು ದೀರ್ಘಾವಧಿ ಅವಧಿಯವರೆಗೆ ರಜೆ ಮಂಜೂರು ಮಾಡುವಂತೆ ಕೋರಿರುವುದನ್ನು ಪರಿಶೀಲಿಸಲಾಗಿ ಸಮೂಹ 'ಬಿ' ವೃಂದದ ಅಧಿಕಾರಿಗಳಾದ ನೀವು ನಿಮ್ಮ ಪತ್ನಿಯ ಆರೋಗ್ಯ ಅಥವಾ ಇನ್ನಿತರ ಯಾವುದೇ ಕಾರಣಗಳಿದ್ದರೂ, ನಿಮ್ಮ ಕೋರಿಕೆ ಅನ್ವಯ ವರ್ಗಾವಣೆ ಮಾಡಲಾಗಿದ್ದ

ಕಛೇರಿಯಲ್ಲಿ (ಜಿಲ್ಲಾ ಪಂಚಾಯಿತಿ ಚಿಕ್ಕಮಗಳೂರು) ಕರ್ತವ್ಯಕ್ಕೆ ವರದಿ ಮಾಡಿಕೊಂಡ ನಂತರ ಸೂಕ್ತ ಮಾರ್ಗದ ಅನ್ವಯ ರಜೆ ಅರ್ಜಿ ಸಲ್ಲಿಸಿ ರಜೆ ಮಂಜೂರಾತಿ ಪಡೆದುಕೊಂಡು ರಜೆ ಉಪಯೋಗಿಸಬಹುದಾಗಿತ್ತಾದರೂ ನಿಯಮಗಳ ಅನ್ವಯ ಇಂತಹ ಸಮುಚಿತ ಮಾರ್ಗವನ್ನು ಅನುಸರಿಸದೇ ಸರ್ಕಾರದ ಕರ್ತವ್ಯಕ್ಕೆ ದೀರ್ಘಾವಧಿ ಅನಧಿಕೃತ ಗೈರು ಹಾಜರಾಗಿದ್ದನ್ನು ಪರಿಶೀಲಿಸಲಾಗಿ, ಕರ್ನಾಟಕ ನಾಗರಿಕ ಸೇವಾ ನಿಯಮಗಳು, 1957ರ ನಿಯಮ:83(1)ರ ಅನ್ವಯ "ಸರ್ಕಾರಿ ನೌಕರನು ವರ್ಗಾವಣೆ ಹೊಂದಿ ರಜೆ ಕೋರಿದರೆ ವೈದ್ಯಕೀಯ ಕಾರಣದ ಹೊರತು (ಅಂದರೆ ಆತನ ಅಂದರೆ ಸರ್ಕಾರಿ ನೌಕರನು ಸ್ವಂತ ಆರೋಗ್ಯಕ್ಕೆ ಸಂಬಂಧಿಸಿದಂತೆ ವೈದ್ಯಕೀಯ ಕಾರಣದ ಹೊರತು) ಬೇರಾವುದೇ ಕಾರಣಕ್ಕಾಗಿ ಅವನಿಗೆ ರಜೆಯನ್ನು ನೀಡತಕ್ಕದ್ದಲ್ಲವೆಂದು" ಸ್ಪಷ್ಟವಾಗಿದ್ದರಿಂದ, ಮೇಲೆ ತಿಳಿಸಲಾದ ನಿಯಮಗಳಿಗೆ ವಿರುದ್ಧವಾಗಿ ನೀವು ವರ್ತಿಸಿರುವುದು ಮೇಲ್ನೋಟಕ್ಕೆ ಸಾಬೀತಾಗಿದ್ದರಿಂದ ನಿಮ್ಮ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸಲು ಉದ್ದೇಶಿಸಲಾಗಿದೆ.

**ಆರೋಪ: 4ಕ್ಕೆ ಸಲ್ಲಿಸಿರುವ ಅವರ ವಿವರಣೆ:**

ನಾಲ್ಕನೇ ಆರೋಪದಲ್ಲಿ ವಿವರಿಸಿರುವ ಎಲ್ಲಾ ಅಂಶಗಳು ತಾವು ನನಗೆ ಬರೆದಿರುವ ದಿನಾಂಕ:16.02.2008ರ ಪತ್ರಕ್ಕೆ (ನಿಶಾನೆ ಡಿ–6 ಎಂದು ಗುರುತಿಸಿ ಲಗತ್ತಿಸಿರುವ ದಸ್ತಾವೇಜು) ಮತ್ತು ತಾವು ನನಗೆ ಮಾನವೀಯತೆ ದೃಷ್ಠಿಯಿಂದ ರಜೆ ಮಂಜೂರು ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವ ದಿನಾಂಕ: 05/11.04.2008ರ ಪತ್ರಕ್ಕೆ (ನಿಶಾನೆ ಡಿ–7 ಎಂದು ಗುರುತಿಸಿ ಲಗತ್ತಿಸಿರುವ ದಸ್ತಾವೇಜು) ವಿರುದ್ಧವಾಗಿರುತ್ತದೆ. ಒಂದು ವರ್ಷದ ಹಿಂದೆ ಅಂದರೆ 2008ರಲ್ಲಿ ನನ್ನ ಎಲ್ಲಾ ಕಷ್ಟಗಳನ್ನು ಅರ್ಥೈಸಿಕೊಂಡು ಮಾನವೀಯತೆ ತೋರಿದ ತಾವು 2009ರಲ್ಲಿ ತಮ್ಮ ನಿಲುವನ್ನು ಬದಲಿಸಿ ನನ್ನ ಮೇಲೆ ಆರೋಪ ಹೊರಿಸಿರುವುದು ಎಷ್ಟು ಸಮಂಜಸ ಎಂಬುದನ್ನು ಪರ್ಯಾಲೋಚಿಸಬೇಕೆಂದು ಕೋರುತ್ತೇನೆ. ನನ್ನ ಹೆಂಡತಿ ಕಿಡ್ನಿ ತೊಂದರೆಯಿಂದ ನರಳುತ್ತಿರುವಾಗ ಆಕೆಯ ಗಂಡನಾಗಿ ನಾನು ಸನಿಹದಲ್ಲಿದ್ದು ಆಕೆಯಲ್ಲಿ ಆತ್ಮಸ್ಥೈರ್ಯ ತುಂಬುವುದರ ಜೊತೆ ಜೊತೆಗೆ ಸೂಕ್ತ ವೈದ್ಯಕೀಯ ಚಿಕಿತ್ಸೆ ಮತ್ತು ಆರೈಕೆಯನ್ನು ನಿರಂತರವಾಗಿ ಮಾಡಬೇಕಾದ್ದು ನನ್ನ ಕರ್ತವ್ಯ ಮತ್ತು ಜವಾಬ್ದಾರಿಯಾಗಿದೆ. ಈ ಹಿನ್ನಲೆಯಲ್ಲಿ ನಾನು ಕರ್ತವ್ಯಕ್ಕೆ ಹೋಗಲು ಸಾಧ್ಯವಾಗಿರಲಿಲ್ಲ. ಈ ಎಲ್ಲಾ ವಾಸ್ತವ ಸಂಗತಿಗಳನ್ನು ತಾವು ಮನಗಂಡ ನಂತರವೇ ನಾನು ಪ್ರಾರ್ಥಿಸಿರುವ ರಜೆಯನ್ನು ಮಾನವೀಯತೆ ದೃಷ್ಠಿಯಿಂದ ಪರಿಗಣಿಸಿ ಮಂಜೂರು ಮಾಡುವಂತೆ ಶಿಫಾರಸ್ಸು ಮಾಡಿದ್ದೀರಿ. ತಮ್ಮ ಈ ಕ್ರಮವೂ ಸಹ 106–ಎ ನಿಯಮದ Exception clause ಅಡಿ ಬರುತ್ತದೆ. ಆದುದರಿಂದ ತಾವು ದಿನಾಂಕ:05/11.04.2008ರ ಪತ್ರದಲ್ಲಿ ರಜೆ ಮಂಜೂರಾತಿಗೆ ಶಿಫಾರಸ್ಸು ಮಾಡಿರುವ ಸತ್ಯವನ್ನು ಪುನರ್ ಮನನ ಮಾಡಿಕೊಂಡು "ಆರೋಪ ಮಾಡಲೇ ಬೇಕೆಂದು ಮಾಡಿರುವ ಆರೋಪವನ್ನು" ಮರು ಪರಿಶೀಲಿಸಿ ಆರೋಪವು ಸತ್ಯವಲ್ಲವೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುತ್ತೇನೆ. ಈ ಸಂದರ್ಭದಲ್ಲಿ ಮಾನ್ಯ ಶ್ರೀ ರಾಮಾ ಜೋಯ್ಸ್, ಸನ್ಮಾನ್ಯ ನಿವೃತ್ತ ಮುಖ್ಯ ನ್ಯಾಯಾಧೀಶರು ಬರೆದು ಪ್ರಕಟಿಸಿದ "SERVICES UNDER THE STATE" ಪುಸ್ತಕದಲ್ಲಿ ಪ್ರಸ್ತಾಪಿಸಿರುವ ಶುಕ್ರ ನೀತಿಯನ್ನು ಈ ಕೆಳಗೆ ಮಂಡಿಸಿರುತ್ತೇನೆ.

" Low Salary, harsh treatment, insults and imposition of heavy penalties are causes of unrest among the employees. Statisfied with adequate wages, promoted honourbly and consoled or cheered up gentle words, the employes would never desert the king".

ಮೇಲಿನ ತತ್ವವು ಆಡಳಿತ ನಡೆಸುವವರಿಗೆ ಈಗಲೂ ದಾರಿ ದೀಪವಾಗಿದೆ ಎಂದು ಭಾವಿಸಿ ತಮ್ಮ ಅವಗಾಹನೆಗೆ ಮಂಡಿಸಿರುತ್ತೇನೆ.

ಮೇಲೆ ವಿವರಿಸಿರುವ ವಿಷಯಗಳ ವಸ್ತು ಸ್ಥಿತಿಯ ಹಿನ್ನೆಲೆಯಲ್ಲಿ ನಾಲ್ಕನೇ ಆರೋಪವು ಸತ್ಯವಲ್ಲವಾದ್ದರಿಂದ ಆರೋಪವನ್ನು ಒಪ್ಪದೇ ನಿರಾಕರಿಸುತ್ತೇನೆ.

**ಆರೋಪ: 4ಕ್ಕೆ ಸಲ್ಲಿಸಿರುವ ಅವರ ವಿವರಣೆಯ ವಿಶ್ಲೇಷಣೆ:**

ಸದರಿ ಆಪಾದಿತ ಸರ್ಕಾರಿ ಅಧಿಕಾರಿಗಳು 4ನೇ ಆರೋಪಕ್ಕೆ ಸಂಬಂಧಿಸಿದಂತೆ ಸಲ್ಲಿಸಿರುವ ಅವರ ವಿವರಣೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ದಿನಾಂಕ:05/11.04.2008 ರಂದು ಈ ನಿರ್ದೇಶನಾಲಯದಿಂದ ಸಲ್ಲಿಸಿದ ಪ್ರಸ್ತಾವನೆಯಲ್ಲಿ ಅವರಿಗೆ ರಜಾ ಮಂಜೂರು ಮಾಡುವಂತೆ ಕೋರಿದ್ದನ್ನು ನಂತರ ಅವರ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸಿರುವ ಕುರಿತು ಪ್ರಶ್ನಿಸಿದ್ದು, ಸದರಿ ಅಧಿಕಾರಿಗಳು ಸಲ್ಲಿಸಿದ್ದ ರಜಾ ಅರ್ಜಿಗಳಲ್ಲಿ ಯಾವುದೇ ಹಂತದಲ್ಲಿಯೂ ಅವರ ವರ್ಗಾವಣೆಯು ಕೋರಿಕೆ ವರ್ಗಾವಣೆ ಕುರಿತು ಸರ್ಕಾರದ/ಇಲಾಖಾ ಮುಖ್ಯಸ್ಥರ ವಿರುದ್ಧ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಲ್ಲಿಸಿದ್ದ ಮಾಹಿತಿ ಸಲ್ಲಿಸದೆ ಇದ್ದುದರಿಂದ ಮಾನವೀಯ ದೃಷ್ಠಿಯಿಂದ ರಜೆ ಮಂಜೂರಾತಿಗಾಗಿ ಪ್ರಸ್ತಾವನೆ ಸಲ್ಲಿಸಲಾಗಿತ್ತು.

ಸದರಿ ಅಧಿಕಾರಿಗಳು ಅವರ ವರ್ಗಾವಣೆಗೆ ಸಂಬಂಧಿಸಿದಂತೆ ಸಂಪೂರ್ಣವಾದ ಮಾಹಿತಿ ಒದಗಿಸಿದ್ದಲ್ಲಿ ಅವರ ಪ್ರಕರಣವು ಈ ಹಂತದವರೆಗೂ ಮುಂದುವರೆಯುವ ಸಾಧ್ಯತೆ ಇರಲಿಲ್ಲವಾದ್ದರಿಂದ ಆರೋಪ–4ಕ್ಕೆ ಸಂಬಂಧಿಸಿದಂತೆ ಅವರ ವಿವರಣೆಯನ್ನು ಪರಿಗಣಿಸಲು ಸೂಕ್ತವಲ್ಲವೆಂದು ತಿರಸ್ಕರಿಸಲಾಗಿದೆ.

ಸದರಿ ಸಹಾಯಕ ನಿರ್ದೇಶಕರಾದ ಶ್ರೀ ಎ.ಕೆ. ಹನುಮಂತಪ್ಪ, ಅವರು ಆರೋಪ: 4ಕ್ಕೆ ಸಲ್ಲಿಸಿರುವ ಅವರ ವಿವರಣೆಯಲ್ಲಿ ಇನ್ನಿತರ ವಿಷಯಗಳೊಂದಿಗೆ ನಿವೃತ್ತ ಮುಖ್ಯ ನ್ಯಾಯಾಧೀಶರು ಬರೆಯಲಾದ "Services Under the State" "low Salary, harsh treatment, insults and imposition of penalty are causes of unrest" ಎಂಬುದನ್ನು ವಿವರಿಸಿದ್ದು, ಸದರಿ ಅಧಿಕಾರಿಗಳಾದ ಶ್ರೀ ಎ.ಕೆ. ಹನುಮಂತಪ್ಪ, ಸಹಾಯಕ ನಿರ್ದೇಶಕರು, ರೂ 11400 ರಿಂದ 21600ರ ವರೆಗಿನ ಉತ್ತಮ ವೇತನ ಶ್ರೇಣಿ ಹೊಂದಿರುವ ಸಮೂಹ 'ಬಿ' ವೃಂದದ ಹಾಗೂ ಸರ್ಕಾರದ ಸೇವೆಗೆ ಸೇರಿದ ನಂತರ 2–3 ಬಡ್ತಿ ಸಹಿತ ಅನೇಕ ಉತ್ತಮವಾದ ಸೌಲಭ್ಯ ಪಡೆದುಕೊಂಡಿರುವ ಸರ್ಕಾರದ ಒಂದು ಭಾಗವಾದ ಅಧಿಕಾರಿಗಳ ವರ್ಗಕ್ಕೆ ಸೇರಿದವರಾಗಿದ್ದರಿಂದ ಮೇಲಿನ ಅಂಶಗಳು ಯಾವುದೊಂದು ಅವರಿಗೆ ಅನ್ವಯಿಸಲು ಸಾಧ್ಯವಿಲ್ಲವೆಂದು ಅವರ ವಿವರಣೆಯನ್ನು ಒಪ್ಪಲು ಸಾಧ್ಯವಿಲ್ಲವೆಂದು ತಿರಸ್ಕರಿಸಲಾಗಿದೆ.

**ಆರೋಪ: 5**

ದಿನಾಂಕ: 15.04.2004ರಿಂದ 02.09.2005ರ ವರೆಗಿನ ನಿಮ್ಮ ಅನಧಿಕೃತ ಗೈರು ಹಾಜರಾತಿಯನ್ನು ಸಕ್ರಮಗೊಳಿಸುವ ಕುರಿತು ದಿನಾಂಕ: 26.06.2008ರಂದು ಸಲ್ಲಿಸಿದ ನಿಮ್ಮ ಅರ್ಜಿಯೊಂದರಲ್ಲಿ ನಿಮ್ಮ ಹಕ್ಕಿನಲ್ಲಿರುವ ಗಳಿಕೆ ರಜೆ/ಪರಿವರ್ತಿತ ರಜೆ ಹಾಗೂ ನಿಮ್ಮ ರಜೆಯಲ್ಲಿ ಕೊರತೆ ಉಂಟಾದಲ್ಲಿ ಹಕ್ಕಿನಲ್ಲಿಲ್ಲದ ರಜೆ (leave not due) ಮಂಜೂರು ಮಾಡಬೇಕೆಂಬ ನಿಮ್ಮ ಕೋರಿಕೆಯನ್ನು ಪರಿಶೀಲಿಸಲಾಗಿ ನಿಮ್ಮ ಈ ಕೋರಿಕೆಯು ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1957ರ ನಿಯಮ:114ರ ಅನ್ವಯ ಹಕ್ಕಿನಲ್ಲಿಲ್ಲದ ರಜೆಯನ್ನು (leave not due) ಸುದೀರ್ಘವಾದ ಖಾಯಿಲೆಯಿಂದ ಬಳಲುತ್ತಿರುವ **"ಸರ್ಕಾರಿ ನೌಕರನಿಗೆ"** ಮಾತ್ರ ಅದೇ ನಿಯಮಗಳಲ್ಲಿ ವಿಧಿಸಲಾದ ಷರತ್ತುಗಳ ಅನ್ವಯ, ಮಂಜೂರು ಮಾಡಬಹುದಾಗಿದ್ದರಿಂದ ನೀವು ಸಲ್ಲಿಸಿರುವ ಕೋರಿಕೆಯು ಮೇಲೆ ತಿಳಿಸಲಾದ ನಿಯಮಗಳಿಗೆ ವಿರುದ್ಧವಾಗಿರುವುದರಿಂದ, ಸರ್ಕಾರದ ಜವಾಬ್ದಾರಿಯುತ ಸಮೂಹ 'ಬಿ' ಅಧಿಕಾರಿಯಾದ ನೀವು ಮೇಲಿನ ನಿಯಮಗಳನ್ನು ಉಲ್ಲಂಘಿಸಿ ದಿನಾಂಕ: 15.10.2004 ರಿಂದ 02.09.2005ರ ವರೆಗೆ ಅನಧಿಕೃತ ಗೈರು ಹಾಜರಾಗಿದ್ದರಿಂದ ನಿಮ್ಮ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸಲು ಉದ್ದೇಶಿಸಲಾಗಿದೆ.

**ಆರೋಪ: 5ಕ್ಕೆ ಸಲ್ಲಿಸಿರುವ ಅವರ ವಿವರಣೆ:**

ಈ ಆರೋಪದಲ್ಲಿ ನಾನು ರಜೆ ಮಂಜೂರಾತಿಗಾಗಿ ಕೋರಿರುವ ನಿಯಮಗಳ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ. ನಿಯಮವನ್ನು ವಿಶ್ಲೇಷಿಸಿದ ಬಳಿಕ ನಾನು ನಿಯಮಗಳನ್ನು ಉಲ್ಲಂಘಿಸಿರುತ್ತೇನೆ ಎಂಬ ಆರೋಪ ಹೊರಿಸಲಾಗಿದೆ. ಈ ಆರೋಪದ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿದರ ನಿಯಮಗಳಲ್ಲಿ ಕಂಡು ಬರುವ ವ್ಯತ್ಯಾಸಗಳೇ ಹೊರತು ನನ್ನ ದುರ್ನಡತೆಯ ವಿಷಯ ಮುಖ್ಯವಾಗಿಲ್ಲ. ಕೆ.ಸಿ.ಎಸ್.ಆರ್ ನಿಯಮ 109ರಲ್ಲಿ ಹೇಳಿರುವುದನ್ನು ಯಥಾವತ್ತಾಗಿ ಮಂಡಿಸಿರುತ್ತೇನೆ.

"109: Any kind of leave under these rules may be granted in combination with or in continuation of any kind of leave (except casual leave)

ನಾನು ಕೋರಿರುವ leave not due ರಜೆಯು 114ನೇ ನಿಯಮದ ವ್ಯಾಪ್ತಿಯಲ್ಲಿ ಬರುವುದಿಲ್ಲವಾದರೆ ಮೇಲೆ ಹೇಳಿರುವ 109ನೇ ನಿಯಮದಡಿ ಹಕ್ಕಿನಲ್ಲಿರುವ ರಜೆಯನ್ನು ಮಂಜೂರು ಮಾಡಬಹುದಾಗಿದೆ. ಉಳಿದ ಅವಧಿಯನ್ನು 117ನೇ ನಿಯಮದಡಿ ವಿಶೇಷ ಅಸಾಧಾರಣ (ರಜೆ ಸಂಬಳ ರಹಿತ) ಎಂದು ಪರಿಗಣಿಸಿ ಗೈರುಹಾಜರಿ ಅವಧಿಯನ್ನು ಸಕ್ರಮಗೊಳಿಸಲು ಅವಕಾಶವಿರುತ್ತದೆ. ನನ್ನ ಮೇಲಿನ ಐದನೇ ಆರೋಪವು ಒಂದರಿಂದ 4ರ ವರೆಗಿನ ಆರೋಪಗಳ ಪುನಾರಾವರ್ತನೆ ಆಗಿರುವುದರಿಂದ ಸದರಿ ಆರೋಪಗಳಿಗೆ ನಾನು ಸಲ್ಲಿಸಿರುವ ಹೇಳಿಕೆಯು ಈ ಆರೋಪಕ್ಕೂ ಅನ್ವಯಿಸುತ್ತದೆ ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುತ್ತೇನೆ. ಆ ಹಿನ್ನೆಲೆಯಲ್ಲಿ ಐದನೇ ಆರೋಪವನ್ನು ಒಪ್ಪದೇ ನಿರಾಕರಿಸುತ್ತೇನೆ.

**ಪ್ರಾರ್ಥನೆ:**

ನನ್ನ ಗೈರು ಹಾಜರಾತಿಯು ನನ್ನ ಕೈಮೀರಿದ ಸಂದರ್ಭದಿಂದ ಆಗಿರುತ್ತದೆ ಎಂಬುದನ್ನು ನಾನು ತಮಗೆ ಮನವರಿಕೆ ಮಾಡಿಕೊಟ್ಟಿರುವುದನ್ನು ತಾವು ಒಪ್ಪಿಕೊಂಡಿರುವುದನ್ನು ನಾನು ತಮಗೆ ಸಲ್ಲಿಸಿರುವ ನಿಶಾನೆ ಡಿ–6 ಮತ್ತು ಡಿ–7ರ ದಸ್ತಾವೇಜುಗಳಿಂದ ಹಾಗೂ 106ಎ ನಿಯಮದ "exception cluse" ನಿಂದ ದೃಢಪಡುತ್ತದೆ. ಆದ್ದರಿಂದ ನನ್ನ ಮೇಲೆ ಶಿಸ್ತು ಕ್ರಮ ಜರುಗಿಸಲು ಉದ್ದೇಶಿಸಿರುವ ಕ್ರಮವನ್ನು ಕೈಬಿಟ್ಟು ಆರೋಪಗಳಿಂದ ಮುಕ್ತಗೊಳಿಸಬೇಕೆಂದು ಪ್ರಾರ್ಥಿಸುತ್ತೇನೆ. ನನ್ನ ಪ್ರಾರ್ಥನೆಯು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಶ್ರೀಮತಿ ಡಾ॥ ಜಯಮ್ಮ ಹಜ್ ವಿರುದ್ಧ ರಾಜ್ಯ (1993 K.S.L.J 1988) ಪ್ರಕರಣದಲ್ಲಿ ನೀಡಿರುವ ತೀರ್ಪಿಗೆ ಅನ್ವಯವಾಗಿರುತ್ತದೆ. ಸದರಿ ಪ್ರಕರಣ ಛಾಯಾ ಪ್ರತಿಯನ್ನು ನಿಶಾನೆ (ಡಿ–8)

ಎಂದು ಗುರುತಿಸಿ ತಮ್ಮ ಅವಗಾಹನೆಗಾಗಿ ಸಲ್ಲಿಸಿರುತ್ತೇನೆ. ಹಾಗೂ ಶಿಸ್ತು ಕ್ರಮವನ್ನು ಈ ಹಂತದಲ್ಲಿಯೇ ಕೈಬಿಟ್ಟು ವೈಯಕ್ತಿಕ ಕುಟುಂಬ ಜೀವನ್ದಲ್ಲಿ ನೋವು ಅನುಭವಿಸುತ್ತಿರುವ ನನಗೆ ನ್ಯಾಯಯುತ ಪರಿಹಾರ ನೀಡಬೇಕೆಂದು ಅತ್ಯಂತ ವಿಧೇಯತೆಯಿಂದ ಪ್ರಾರ್ಥಿಸುತ್ತೇನೆ.

**ಆರೋಪ: 5ಕ್ಕೆ ಸಲ್ಲಿಸಿರುವ ಅವರ ವಿವರಣೆಯ ವಿಶ್ಲೇಷಣೆ:**

ಕೋರಿಕೆ ವರ್ಗಾವಣೆ ಹೊಂದಿ ಬಿಡುಗಡೆ ಹೊಂದಿದ ತಕ್ಷಣ ವರ್ಗಾವಣೆ ಹೊಂದಿದ್ದ ಕಛೇರಿಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ಸುಧೀರ್ಘವಾದ ಅವಧಿಯಲ್ಲಿ (ದಿನಾಂಕ:15.10.2004 ರಿಂದ ದಿನಾಂಕ:02.09.2005ರ ವರೆಗೆ) ಸರ್ಕಾರದ ಕರ್ತವ್ಯಕ್ಕೆ ಗೈರು ಹಾಜರಾಗಿದ್ದ ಪ್ರಕರಣಕ್ಕೆ ಸದರಿ ಅಧಿಕಾರಿಗಳು ಅವರ ವಿವರಣೆಯಲ್ಲಿ ತಿಳಿಸಲಾದ ನಿಯಮ 109 ಅನ್ವಯಿಸುವುದಿಲ್ಲವಾದ್ದರಿಂದ ಹಾಗೂ ಅವರ ವಿವರಣೆಯು ಕೊನೆಯ ಕಂಡಿಕೆಯಲ್ಲಿ Dr. Jayamma Vs State ಪ್ರಕರಣದಲ್ಲಿ ಗೌರವನ್ವಿತ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ನೀಡಿದ ತೀರ್ಪಿಗೆ ಅವರ ಪ್ರಕರಣವು ಅನ್ವಯಿಸಲು ಸಾಧ್ಯವಿಲ್ಲವಾದ್ದರಿಂದ 5ನೇ ಆರೋಪಕ್ಕೆ ಅವರು ಸಲ್ಲಿಸಿರುವ ವಿವರಣೆಯು ಅಸಮರ್ಪಕವೆಂದು ತಿರಸ್ಕರಿಸಲಾಗಿದೆ.

ಮೇಲೆ ವಿವರಿಸಿದ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಆದೇಶದಲ್ಲಿ ಒಳಪಟ್ಟಿರುವ ಡಾ॥ ಜಯಮ್ಮ ಅವರು ವರ್ಗಾವಣೆ ಹೊಂದಿದ ಕಛೇರಿಯಲ್ಲಿ ಹಾಜರಾದ ನಂತರ ಅನಧಿಕೃತ ಗೈರು ಹಾಜರಾಗಿರುವುದಕ್ಕೆ ಸಂಬಂಧಿಸಿದ್ದು, ಪ್ರಸ್ತುತ ಪ್ರಕರಣದಲ್ಲಿ ಶ್ರೀ ಎ.ಕೆ. ಹನುಮಂತಪ್ಪ, ಸಹಾಯಕ ನಿರ್ದೇಶಕರು, ಅವರ ಕೋರಿಕೆ ಅನ್ವಯ ವರ್ಗಾವಣೆ ಹೊಂದಿ ಬಿಡುಗಡೆಗೊಂಡ ನಂತರ ವರ್ಗಾವಣೆಯಾದ ಕಛೇರಿಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೇ ಸುಧೀರ್ಘವಾದ ಅವಧಿಯಲ್ಲಿ ಸರ್ಕಾರದ ಸೇವೆಗೆ ಅನಧಿಕೃತವಾಗಿ ಗೈರು ಹಾಜರಾಗಿದ್ದರಿಂದ ಅವರು 5ನೇ ಆರೋಪಕ್ಕೆ ಸಲ್ಲಿಸಿರುವ ವಿವರಣೆಯನ್ನು ತಿರಸ್ಕರಿಸಲಾಗಿದೆ.

ಒಟ್ಟಾರೆ ಸದರಿ ಆಪಾದಿತ ಅಧಿಕಾರಿಗಳ ವಿರುದ್ಧ ಹೊರಿಸಲಾದ 5 ಆರೋಪಗಳಿಗೆ ಸಲ್ಲಿಸಿರುವ ಅವರ ವಿವರಣೆಯಲ್ಲಿ ಅವರ ವಿರುದ್ಧದ ಯಾವುದೇ ಒಂದೂ ಆರೋಪವನ್ನು ಸಮರ್ಥಿಸಿಕೊಳ್ಳಲು ಅಸಮರ್ಥವಾಗಿದ್ದರಿಂದ ಅವರ ವಿವರಣೆಯನ್ನು ಸಂಪೂರ್ಣವಾಗಿ ತಿರಸ್ಕರಿಸಲಾಗಿದೆ ಹಾಗೂ ಅವರ ಮೇಲಿನ ಆಪಾದನೆಗಳನ್ನು ಅಲ್ಲಗಳೆದಿರುತ್ತಾರಾದ್ದರಿಂದ ಅವರ ವಿರುದ್ಧದ ಆಪಾದನೆಗಳ ಕುರಿತು ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಇಲಾಖಾ ವಿಚಾರಣೆಗಾಗಿ ವಿಚಾರಣಾಧಿಕಾರಿಗಳನ್ನು ನೇಮಕಾತಿ ಮಾಡುವುದು ಅಗತ್ಯವಿರುವುದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ: ಆಡಳಿತ/103/09–10**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದ ಶ್ರೀ. ಎ.ಕೆ. ಹನುಮಂತಪ್ಪ, ಸಹಾಯಕ ನಿರ್ದೇಶಕರು, ಇವರ ವಿರುದ್ಧದ ಮೇಲೆ ವಿವರಿಸಲಾದ ಆರೋಪಗಳಿಗೆ ಸಂಬಂಧಿಸಿದಂತೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ: 11(2)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇಲಾಖಾ ವಿಚಾರಣೆಯನ್ನು ಜರುಗಿಸಲು ಶ್ರೀ ಎಂ.ಜಿ. ಹಿರೇಮಠ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ.746, 15ನೇ ಮುಖ್ಯ ರಸ್ತೆ, ಜುಡಿಷಿಯಲ್ ಲೇಔಟ್, ಅಲ್ಲಾಳ ಸಂದ್ರ, ಜಿಕೆವಿಕೆ ಪೋಸ್ಟ್, ಬೆಂಗಳೂರು–560 065, ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ: 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಕೆ.ಸಿ. ಸಾಲಾಪುರ, ಜಂಟಿ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಕೇಂದ್ರ ಕಛೇರಿ, ಬೆಂಗಳೂರು ಇವರನ್ನು ಈ ಪ್ರಕರಣದ ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಈ ನಿರ್ದೇಶನಾಲಯದ ಕೇಂದ್ರ ಕಛೇರಿಯಲ್ಲಿ ಅವರು ಗುರುತಿಸಿ ನಿಗದಿಪಡಿಸುವ ಸ್ಥಳದಲ್ಲಿ ನಡೆಸಬಹುದಾಗಿರುತ್ತದೆ.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 22 ಸೇಇವಿ 2007 ದಿನಾಂಕ: 11.04.2008ರ ಅನ್ವಯ ರೂ. 8,000/– (ರೂಪಾಯಿ ಎಂಟು ಸಾವಿರ ಮಾತ್ರ) ಸಂಭಾವನೆಯನ್ನು ಹಾಗೂ ರೂ.1,500/– (ರೂಪಾಯಿ ಒಂದು ಸಾವಿರದ ಐದು ನೂರು ಮಾತ್ರ) ವಾಹನ ಭತ್ಯೆಯನ್ನು ವಿಚಾರಣಾಧಿಕಾರಿಗಳಿಗೆ ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ಈ ನಿರ್ದೇಶನಾಲಯದ ಕೇಂದ್ರ ಕಛೇರಿಯಿಂದ ಪಾವತಿಸತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣಾ ವರದಿಯನ್ನು 2 ತಿಂಗಳುಗಳೊಳಗಾಗಿ ಸಲ್ಲಿಸುವಂತೆ ಕೋರಲಾಗಿದೆ.

**ಹೆಚ್.ಇ. ರಾಜಶೇಖರಪ್ಪ**

ಪಿ.ಆರ್.540

ನಿರ್ದೇಶಕರು

ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಮತ್ತು ಶಿಸ್ತು ಪ್ರಾಧಿಕಾರ.